WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೪೬ | ಬೆಂಗಳೂರು, ಗುರುವಾರ, ಡಿಸೆಂಬರ್ ೧೫, ೨೦೧೧ (ಮಾರ್ಗಶಿರ ೨೪, ಶಕ ವರ್ಷ ೧೯೩೩) | ಸಂಚಿಕೆ ೪೯

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಆ್ಯಂಟಿ ಟೆರರಿಸ್ಟ್ ಸೆಲ್ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ವರ್ಗ ಮತ್ತು ಆ್ಯಂಟಿ ಟೆರರಿಸ್ಟ್ ಸೆಲ್ ಘಟಕಕ್ಕೆ ಸೃಜಿಸಲಾದ ಹೆಚ್ಚುವರಿ ಸಿಬ್ಬಂದಿ ವರ್ಗವನ್ನು ಕರ್ನಾಟಕ ರಾಜ್ಯ ಭದ್ರತಾ ವಿಭಾಗದ ಆಡಳಿತ ನಿಯಂತ್ರಣಕ್ಕೆ ತರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 190 ಪಿಓಪಿ 2011, ದಿನಾಂಕ : 26–09–2011.
2. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 253 ಪಿಓಪಿ 1992, ದಿನಾಂಕ : 04–11–1992.
3. ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 226 ಪಿಓಪಿ 2005, ದಿನಾಂಕ : 22–07–2006.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ, ಆ್ಯಂಟಿ ನಕ್ಸಲೈಟ್ ಫೋರ್ಸ್ (Anti Naxalite Force) ಕರಾವಳಿ ಕಾವಲು ಪಡೆ ಹಂತ–1 ಮತ್ತು ಹಂತ–2, ಭಯೋತ್ಪಾದನೆ ನಿಗ್ರಹ ದಳ ಕೋಶ [ATC], ಕರ್ನಾಟಕ ಸ್ಟೇಟ್ ಇಂಡಸ್ಟ್ರೀಯಲ್ ಸೆಕ್ಯೂರಿಟಿ ಫೋರ್ಸ್ [KSISF] ಮತ್ತು ರಾಜ್ಯದ ಆಂತರಿಕ ಭದ್ರತಾ ವಿಭಾಗ ಈ ಎಲ್ಲಾ ಘಟಕಗಳನ್ನು ಹುದ್ದೆ ಮತ್ತು ಉಪಕರಣಗಳೊಂದಿಗೆ ಒಂದೇ ಸೂರಿನಡಿ ತಂದು ಕರ್ನಾಟಕ ರಾಜ್ಯ ಆಂತರಿಕ ಭದ್ರತಾ ವಿಭಾಗದ ನೇರ ನಿಯಂತ್ರಣಕ್ಕೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ತರಲಾಗಿದೆ. ಮತ್ತು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಸಮಾನಾಂತರ ಹುದ್ದೆಯ ನೇತೃತ್ವದಲ್ಲಿ ಇದರ ಉಸ್ತುವಾರಿ ಮತ್ತು ನಿಯಂತ್ರಣ ಮಾಡತಕ್ಕದ್ದೆಂದು ಆದೇಶ ಹೊರಡಿಸಿದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಆ್ಯಂಟಿ ಟೆರರಿಸ್ಟ್ ಸೆಲ್, ಹಾಗೂ 5 ಮಂದಿ ಬೆಂಬಲ ಸಿಬ್ಬಂದಿ [ಸ್ಟೆನೋ–1, ಎ.ಪಿ.ಸಿ[ಆ]–2, ಎ.ಪಿ.ಸಿ.[ಚಾ]–1, ದಲಾಯತ್–1] ಮತ್ತು ಮೇಲೆ ಓದಲಾದ(3)ರ ಆದೇಶದಲ್ಲಿ ಹಾಲಿ ರಾಜ್ಯ ಗುಪ್ತ ವಾರ್ತೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆ್ಯಂಟಿ ಟೆರರಿಸ್ಟ್ ಸೆಲ್ ವಿಭಾಗದ ಈ ಕೆಳಕಂಡ ಒಟ್ಟು 62 ಸಿಬ್ಬಂದಿಗಳನ್ನು ಬೇರ್ಪಡಿಸಿ ಆಂತರಿಕ ವಿಭಾಗದ ಐಜಿಪಿ [ಎಟಿಸಿ] ಅವರ ಮೇಲ್ವಿಚಾರಣೆ ನಿಯಂತ್ರಣದಲ್ಲಿ ತರುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

| Sl.No. | Post | Sanctioned Strength |
|---|---|---|
| 1 | SP | 01 |
| 2 | DySP | 02 |
| 3 | PI | 03 |
| 4 | PSI | -- |
| 5 | PC | 40 |
| 6 | WPC | 06 |
| 7 | APC Driver | 10 |
| | **Total** | **62** |

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 190 ಪಿಓಪಿ 2011, ಬೆಂಗಳೂರು, ದಿನಾಂಕ : 10–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಆ್ಯಂಟಿ ಟೆರರಿಸ್ಟ್ ಸೆಲ್ ಹಾಗೂ 5 ಮಂದಿ ಬೆಂಬಲ ಸಿಬ್ಬಂದಿ [ಸ್ಟೆನೋ–1, ಎ.ಪಿ.ಸಿ[ಆ]–2, ಎ.ಪಿ.ಸಿ.[ಚಾ]–1, ದಲಾಯತ್–1] ಐಜಿಪಿ [ಎಟಿಸಿ] ಮತ್ತು ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 226 ಪಿಓಪಿ

2005, ದಿನಾಂಕ : 22-07-2006ರಲ್ಲಿ ಮಂಜೂರು ಮಾಡಿರುವ ಹಾಲಿ ರಾಜ್ಯ ಗುಪ್ತ ವಾರ್ತೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಆ್ಯಂಟಿ ಟೆರರಿಸ್ಟ್ ಸೆಲ್ ವಿಭಾಗದ ಈ ಕೆಳಕಂಡ ಒಟ್ಟು 62 ಸಿಬ್ಬಂದಿಗಳನ್ನು ಬೇರ್ಪಡಿಸಿ ಆಂತರಿಕ ವಿಭಾಗದ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಆ್ಯಂಟಿ ಟೆರರಿಸ್ಟ್ ಸೆಲ್ ಅವರ ಮೇಲ್ವಿಚಾರಣೆ ನಿಯಂತ್ರಣಕ್ಕೆ ವರ್ಗಾಯಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| Sl.No. | Post | Sanctioned Strength |
|---|---|---|
| 1 | SP | 01 |
| 2 | DySP | 02 |
| 3 | PI | 03 |
| 4 | PSI | -- |
| 5 | PC | 40 |
| 6 | WPC | 06 |
| 7 | APC Driver | 10 |
| | **Total** | **62** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 96 ದಿನಾಂಕ : 10-07-1996ರ ಐಟಂ ಸಂಖ್ಯೆ : 53ರಲ್ಲಿನ ಷರತ್ತುಗಳಿಗೊಳಪಟ್ಟು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2508 ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ :** ಧಾರವಾಡ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ : ಜೆ1/ಸಿಆರ್-63/2004 ದಿನಾಂಕ : 10-11-2008 ಹಾಗೂ 30-09-2009.

**ಪ್ರಸ್ತಾವನೆ:**

1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 192ರ ನಿಯಮದಲ್ಲಿ ಪ್ರತಿ ಕೇಂದ್ರ ಕಾರಾಗೃಹಕ್ಕಾಗಿ ಸಲಹಾ ಮಂಡಳಿಯನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವಿರುತ್ತದೆ. ದೀರ್ಘಾವಧಿ ಶಿಕ್ಷೆಗೊಳಪಟ್ಟ ಅಪರಾಧಿಗಳನ್ನು ವಿಮರ್ಶಿಸುವುದು ಈ ಮಂಡಳಿಯ ಉದ್ದೇಶವಾಗಿರುತ್ತದೆ.

ಈ ಸಲಹಾ ಮಂಡಳಿಯು ಈ ಕೆಳಕಂಡವರನ್ನು ಒಳಗೊಂಡಿರುತ್ತದೆ :-

**ಆಯಾ ಜಿಲ್ಲೆಯ**

| | | |
|---|---|---|
| 1 | ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿಗಳು | – ಅಧ್ಯಕ್ಷರು |
| 2 | ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | – ಸದಸ್ಯರು |
| 3 | ಪೊಲೀಸ್ ಅಧೀಕ್ಷಕರು | – ಸದಸ್ಯರು |
| 4 | ಜಿಲ್ಲಾ ಶಸ್ತ್ರ ಚಿಕಿತ್ಸಕರು | – ಸದಸ್ಯರು |
| 5 | ಮೂರು ಜನ ಸ್ಥಳೀಯ ಅಧಿಕಾರೇತರು | – ಸದಸ್ಯರು |
| 6 | ಕೇಂದ್ರ ಕಾರಾಗೃಹದ ಅಧೀಕ್ಷಕರು | – ಕಾರ್ಯದರ್ಶಿ |

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಮೇಲೆ ಹೇಳಲಾದ ನಿಯಮವನ್ನು ಪ್ರಸ್ತಾಪಿಸಿ, 3 ಜನ ಸ್ಥಳೀಯ ಅಧಿಕಾರೇತರ ಸದಸ್ಯರನ್ನು ತಿಳಿಸುತ್ತಾ, ಧಾರವಾಡ ಕೇಂದ್ರ ಕಾರಾಗೃಹಕ್ಕೆ ಸಲಹಾ ಮಂಡಳಿಯನ್ನು ರಚಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 339 ಪಿಆರ್‌ಎ 2008, ಬೆಂಗಳೂರು, ದಿನಾಂಕ: 04-10-2011**

ಧಾರವಾಡ ಕೇಂದ್ರ ಕಾರಾಗೃಹದಲ್ಲಿ ದೀರ್ಘಾವಧಿ ಶಿಕ್ಷೆ ಅನುಭವಿಸುತ್ತಿರುವ ಅಪರಾಧಿಗಳನ್ನು ವಿಮರ್ಶಿಸುವ ಸಲುವಾಗಿ, 1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 192ನೇ ನಿಯಮದ ಅನ್ವಯ ಸರ್ಕಾರವು ಧಾರವಾಡ ಕೇಂದ್ರ ಕಾರಾಗೃಹಕ್ಕೆ ಈ ಕೆಳಕಂಡಂತೆ ಸಲಹಾ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ :-

| | | |
|---|---|---|
| 1 | ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳು | – ಅಧ್ಯಕ್ಷರು |
| 2 | ಧಾರವಾಡ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ನ್ಯಾಯಾಧೀಶರು | – ಸದಸ್ಯರು |
| 3 | ಧಾರವಾಡ ಜಿಲ್ಲೆಯ ಪೊಲೀಸ್ ಅಧೀಕ್ಷಕರು | – ಸದಸ್ಯರು |
| 4 | ಧಾರವಾಡ ಜಿಲ್ಲಾ ಶಸ್ತ್ರ ಚಿಕಿತ್ಸಕರು | – ಸದಸ್ಯರು |

| | | |
|---|---|---|
| 5 | ಶ್ರೀಮತಿ ಸಿಸ್ಟರ್ ಐರಿನ್, ಶಾಂತಿ ಪ್ರಗತಿ ಕೇಂದ್ರ, ಹಳಿಯಾಳ ರಸ್ತೆ, ಧಾರವಾಡ | – ಸದಸ್ಯರು * |
| 6 | ಡಾ॥ ಆನಂದ ಪಾಂಡುರಂಗಿ, ಸೈಕಾಟ್ರಿಸ್ ಕೇಂದ್ರ, ಮಿಚಿಗನ್ ಕಾಂಪೌಂಡ್, ಸಪ್ತಾಪುರ, ಧಾರವಾಡ | – ಸದಸ್ಯರು * |
| 7 | ಶ್ರೀ ನಡಕಟ್ಟಿ, ಬಸವ ಸಮಿತಿ ಸದಸ್ಯರು, ಮೃತ್ಯುಂಜಯ ಸೀಡ್ಸ್, ನೆಹರು ಮಾರ್ಕೆಟ್, ಧಾರವಾಡ | – ಸದಸ್ಯರು * |
| 8 | ಧಾರವಾಡ ಕೇಂದ್ರ ಕಾರಾಗೃಹದ ಅಧೀಕ್ಷಕರು | – ಕಾರ್ಯದರ್ಶಿ |

ಅಧಿಕಾರೇತರ ಸದಸ್ಯರ * ಅವಧಿಯು ಮೂರು ವರ್ಷಗಳಿಗೆ ಅಥವಾ ತತ್ಸಂಬಂಧ ಸರ್ಕಾರವು ಮುಂದೆ ನೀಡಬಹುದಾದ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇರುತ್ತದೆ.

ಈ ಸಲಹಾ ಮಂಡಳಿಯು 1974ನೇ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳ 193ರ ನಿಯಮದಲ್ಲಿ ತಿಳಿಸಿರುವ ತನ್ನ ಕಾರ್ಯವನ್ನು ನಿರ್ವಹಿಸತಕ್ಕದ್ದಾಗಿರುತ್ತದೆ.

ಈ ಸಲಹಾ ಮಂಡಳಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000 ದಿನಾಂಕ : 03–02–2001 ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ತಿಳಿಸಲಾಗಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

ಪಿಆರ್.ನಂ. 2509

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಡಿ. ನಾಗರಾಜು, ಹೆಚ್.ಸಿ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಪಿಆರ್–68/09 (ಓ.ಬಿ. ಸಂಖ್ಯೆ: 140/09) ದಿನಾಂಕ: 07–11–09
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು(65)/2009–10 (ಓ.ಬಿ. ಸಂಖ್ಯೆ: 61/2009–10) ದಿನಾಂಕ: 01–04–10
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26–7–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)43/2010–11 ದಿನಾಂಕ: 27–01–2011
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 82 ಸಿಎನ್‌ಎಸ್ 11 ದಿನಾಂಕ: 22–9–2011

**ಪ್ರಸ್ತಾವನೆ:**

ಶ್ರೀ ಹೆಚ್.ಡಿ. ನಾಗರಾಜು, ಹೆಚ್.ಸಿ., ಗಂಡಸಿ ಪೊಲೀಸ್ ಠಾಣೆ ಇವರು ಅರಸೀಕೆರೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

> "ಶ್ರೀ ಹೆಚ್.ಡಿ. ನಾಗರಾಜ, ಸಿ.ಹೆಚ್.ಸಿ.–49, ಆದ ನೀವು ಅರಸೀಕೆರೆ (ಗ್ರಾ) ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ನೀವು ದಿನಾಂಕ: 30–8–09 ರಿಂದ 04–09–09 ರವರೆಗೆ ಒಟ್ಟು ಆರು ದಿನಗಳ ಕಾಲ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ, ದಿ: 05–9–09 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು ಅನಾರೋಗ್ಯದ ಕಾರಣ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದುದಾಗಿ ವೈದ್ಯಕೀಯ ದೃಢೀಕರಣ ಪತ್ರ ನೀಡಿ ರಜೆ ಮಂಜೂರು ಮಾಡುವಂತೆ ಮನವಿ ಸಲ್ಲಿಸಿರುತ್ತೀರಿ. ನೀವು ನಿಮ್ಮ ಮೇಲಾಧಿಕಾರಿಗಳ ಅನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತನ ಪ್ರದರ್ಶಿಸಿ ಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾಸನ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 07–11–09ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವೇತನ ಬಡ್ತಿಗಳಿಗೆ ಬಾಧಕವಾಗದಂತೆ ಆರು ತಿಂಗಳ ಕಾಲ ಮುಂದೂಡಲಾಗಿದೆ. ಅನಧಿಕೃತವಾಗಿ ಗೈರುಹಾಜರಾದ ಅವಧಿ ದಿನಾಂಕ: 30–8–09 ರಿಂದ 04–09–09 ರವರೆಗಿನ ಅವಧಿಯನ್ನು 'ವೇತನರಹಿತ ರಜೆ' ಎಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 01–04–10ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರಿಗೆ ಛೀಮಾರಿ ಹಾಕಲಾಗಿದೆ ಗೈರುಹಾಜರಾದ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತೆ ಪ್ರದರ್ಶಿಸಿರುವುದು ಸಾಬೀತಾಗಿದೆ. ಆದರೆ ಕರ್ನಾಟಕ ಪೊಲೀಸ್ ಕಾಯ್ದೆ 1963 ರನ್ವಯ "ಛೀಮಾರಿ" ದಂಡನೆಯಾಗಿರುವುದಿಲ್ಲ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಆದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 130 ಪೊಸಿಅ 2010, ಬೆಂಗಳೂರು, ದಿನಾಂಕ : 13-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಡಿ. ನಾಗರಾಜು, ಹೆಚ್.ಸಿ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರಿಗೆ ಮೇಲ್ಮನವಿ ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಸೆಕ್ಷನ್ 23(1)(ಎ)(i)ರನ್ವಯ "ವಾಗ್ದಂಡನೆ"ಯನ್ನು ವಿಧಿಸಿ ದಿನಾಂಕ: 30-8-2009 ರಿಂದ 04-9-2009ರ ವರೆಗಿನ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2514

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

**ವಿಷಯ :** ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ ಇವರಿಗೆ ಪಿ.ಹೆಚ್.ಡಿ. ಉನ್ನತ ವ್ಯಾಸಂಗ ಮಾಡಲು ಅನುಮತಿ ನೀಡುವಿಕೆ.

**ಓದಲಾಗಿದೆ :** ಪತ್ರ ಸಂಖ್ಯೆ:ಅಪಸಂ/ಶಿಕ್ಷಣ/ವಿವ-17/2011-12, ದಿನಾಂಕ 04-10-2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಕೋಲಾರ ಜಿಲ್ಲಾ ಉಪ ನಿರ್ದೇಶಕರು ಅವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ, ದೊಡ್ಡರೋಗ ಜಾಗೃತ ಘಟಕ, ಕೋಲಾರರವರು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿ ಪಿ.ಹೆಚ್.ಡಿ. ಉನ್ನತ ವ್ಯಾಸಂಗಕ್ಕೆ ಪ್ರವೇಶ ದೊರೆತಿದ್ದು ವೇತನ ರಹಿತ ರಜೆ ಮೇಲೆ ಉನ್ನತ ವ್ಯಾಸಂಗ ಪೂರ್ಣಗೊಳಿಸಲು ಇಚ್ಛಿಸಿರುವುದರಿಂದ ಅವರಿಗೆ ಉನ್ನತ ವ್ಯಾಸಂಗಕ್ಕೆ ತೆರಳಲು ಅನುಮತಿ ನೀಡುವಂತೆ ಕೋರಿರುತ್ತಾರೆಂದು ತಿಳಿಸಿರುತ್ತಾರೆ. ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ ಇವರು ದಿನಾಂಕ: 02-07-2009 ರಂದು ಸೇವೆಗೆ ಸೇರಿದ್ದು, ಅವರ ಖಾಯಂ ಪೂರ್ವ ಸೇವಾವಧಿ ಮುಗಿದಿದ್ದು ಇನ್ನೂ ಖಾಯಂ ಪೂರ್ವ ಸೇವಾವಧಿ ಘೋಷಣೆ ಆಗಿರುವುದಿಲ್ಲವೆಂದು ಪ್ರಸ್ತಾಪಿತ ಉನ್ನತ ವ್ಯಾಸಂಗಕ್ಕೆ ಅನುಮತಿ ನೀಡುವುದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆಯಾಗುವುದಿಲ್ಲವೆಂದು ಹಾಗೂ ಇಲಾಖೆಯ ಸೇವೆಗೆ ಉನ್ನತ ವ್ಯಾಸಂಗ ಪೂರಕವಾಗಿರುವುದರಿಂದ ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಅಧಿಕಾರಿಗೆ ದಿನಾಂಕ: 13-10-2011 ರಿಂದ ದಿನಾಂಕ: 12-10-2014 ರವರೆಗೆ (ಒಟ್ಟು 3 ವರ್ಷ) ಕರ್ತವ್ಯ ರಹಿತ ದಿನಗಳು/ಲೆಕ್ಕಕ್ಕಿಲ್ಲದ ದಿನಗಳ ಮೇಲೆ ಪಿ.ಹೆಚ್.ಡಿ. ಉನ್ನತ ವ್ಯಾಸಂಗಕ್ಕೆ ತೆರಳಲು ಅನುಮತಿ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ ಇವರು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದಲ್ಲಿ 2011-12ನೇ ಶೈಕ್ಷಣಿಕ ಸಾಲಿನಲ್ಲಿ ಪಿ.ಹೆಚ್.ಡಿ. ಉನ್ನತ ವ್ಯಾಸಂಗಕ್ಕೆ ಆಯ್ಕೆಯಾಗಿದ್ದು, ಉನ್ನತ ವ್ಯಾಸಂಗವನ್ನು ಕರ್ತವ್ಯ ರಹಿತ ದಿನಗಳು/ಲೆಕ್ಕಕ್ಕಿಲ್ಲದ ದಿನಗಳು ಮೇಲೆ ಪೂರ್ಣಗೊಳಿಸಲು ಇಚ್ಛಿಸಿರುತ್ತಾರೆ. ಅಧಿಕಾರಿಯು ಸ್ವಂತ ವೆಚ್ಚದಲ್ಲಿ ಪಿ.ಹೆಚ್.ಡಿ/ಉನ್ನತ ವ್ಯಾಸಂಗ ಕೈಗೊಳ್ಳಲಿರುವುದರಿಂದ ಸರ್ಕಾರಕ್ಕೆ ಯಾವುದೇ ರೀತಿಯ ಆರ್ಥಿಕ ಹೊರೆ ಆಗುವುದಿಲ್ಲ. ಉನ್ನತ ವ್ಯಾಸಂಗ ಇಲಾಖೆಗೆ ಪೂರಕವಾಗಿರುತ್ತದೆಂದು ಆಯುಕ್ತರು ಸಮರ್ಥನೆ ನೀಡಿ ಉನ್ನತ ವ್ಯಾಸಂಗಕ್ಕೆ ತೆರಳಲು ಅನುಮತಿ ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ. ಪಿ.ಹೆಚ್.ಡಿ. ಉನ್ನತ ವ್ಯಾಸಂಗದ ಅವಧಿಯನ್ನು ಲೆಕ್ಕಕ್ಕಿಲ್ಲದ ದಿನಗಳು/ಕರ್ತವ್ಯ ರಹಿತ ದಿನಗಳೆಂದು ಪರಿಗಣಿಸಲು ಸರ್ಕಾರಿ ಅಧಿಕೃತ ಜ್ಞಾಪನಾ ಸಂಖ್ಯೆ: ಎಫ್‌ಡಿ 9 ಎಸ್‌ಆರ್‌ಎಸ್ 93, ದಿನಾಂಕ: 18-11-1993ರಲ್ಲಿ ತಿಳಿಸಿರುವನ್ವಯ ಡಾ॥ ಕೆ.ಎಂ. ಚಂದ್ರಶೇಖರ್‌ರವರು ಮುಚ್ಚಳಿಕೆ ನೀಡಿರುತ್ತಾರೆ. ಇಲಾಖೆಯಲ್ಲಿ ಪಿ.ಹೆಚ್.ಡಿ. ಪದವೀಧರರ ಪ್ರಮಾಣ ಕಡಿಮೆ ಇರುವುದರಿಂದ ಸದರಿ ಅಧಿಕಾರಿಗೆ ಉನ್ನತ ವ್ಯಾಸಂಗಕ್ಕೆ ಅನುಮತಿ ನೀಡಿದಲ್ಲಿ ಉನ್ನತ ವ್ಯಾಸಂಗದ ನಂತರ ಅದರ ಲಾಭವನ್ನು ಇಲಾಖೆಯಲ್ಲಿ ಪಡೆಯಬಹುದಾಗಿರುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಇಲಾಖಾ ಹಿತದೃಷ್ಟಿಯಿಂದ ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ ಇವರಿಗೆ ದಿನಾಂಕ: 13-10-2011ರಿಂದ 12-10-2014ರವರೆಗೆ (ಒಟ್ಟು 3 ವರ್ಷ) ಕರ್ತವ್ಯ ರಹಿತ ದಿನಗಳು/ಲೆಕ್ಕಕ್ಕಿಲ್ಲದ ದಿನಗಳ ಮೇಲೆ ಉನ್ನತ ವ್ಯಾಸಂಗಕ್ಕೆ ತೆರಳಲು ಅನುಮತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 254 ಪಸಸೇ 2011, ಬೆಂಗಳೂರು, ದಿನಾಂಕ : 13ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 9 ಎಸ್‌ಆರ್‌ಎಸ್ 93, ದಿನಾಂಕ 18-11-1993ರಲ್ಲಿ ತಿಳಿಸಿರುವನ್ವಯ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಡಾ॥ ಕೆ.ಎಂ. ಚಂದ್ರಶೇಖರ್, ಪಶುವೈದ್ಯಾಧಿಕಾರಿ, ದೊಡ್ಡರೋಗ ನಿವಾರಣಾ ಜಾಗೃತ ಘಟಕ, ಕೋಲಾರ, ಕೋಲಾರ ಜಿಲ್ಲೆ ಇವರಿಗೆ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಅಧೀನದ ಪಶುವೈದ್ಯಕೀಯ ಕಾಲೇಜು, ಹೆಬ್ಬಾಳ, ಬೆಂಗಳೂರು ಇಲ್ಲಿ ದಿನಾಂಕ: 13-10-2011 ರಿಂದ ದಿನಾಂಕ: 12-10-2014ರವರೆಗಿನ (ಒಟ್ಟು 3 ವರ್ಷ) ಅವಧಿಯಲ್ಲಿ ಪಿ.ಹೆಚ್.ಡಿ. (Veterinary Microbiology) ಉನ್ನತ ವ್ಯಾಸಂಗ ಮಾಡಲು ಅನುಮತಿ ನೀಡಿದೆ.

(1) ಉನ್ನತ ವ್ಯಾಸಂಗದ ಅವಧಿಯನ್ನು "ಲೆಕ್ಕಕ್ಕಿಲ್ಲದ ದಿನಗಳು/ಕರ್ತವ್ಯ ರಹಿತ ದಿನಗಳು" (Dies-non or Non-duty) ಎಂದು ಪರಿಗಣಿಸತಕ್ಕದ್ದು.

(2) ಉನ್ನತ ವ್ಯಾಸಂಗದ ಅವಧಿಯನ್ನು ವಾರ್ಷಿಕ ಬಡ್ತಿ, ನಿವೃತ್ತಿ ವೇತನ ಸೌಲಭ್ಯ, ರಜೆ ಸೌಲಭ್ಯ ಮತ್ತು ಇನ್ನಿತರೆ ಯಾವುದೇ ಆರ್ಥಿಕ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 469 ವೆ. 4/2010, ದಿನಾಂಕ: 13–10–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ)

ಪಿ.ಆರ್. 2515

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

**ವಿಷಯ :** ಕರ್ನಾಟಕ ಪಶುವೈದ್ಯಕೀಯ ಪರಿಷತ್‌ಗೆ ಕೇಂದ್ರ ಪುರಸ್ಕೃತ ಯೋಜನೆ ಪ್ರೊಫೆಷನಲ್ ಎಫಿಷಿಯನ್ಸಿ ಡೆವಲಪ್‌ಮೆಂಟ್ ಕಾರ್ಯಕ್ರಮದಡಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 13 ಪಪಾಯೋ 2011 ದಿನಾಂಕ 29–03–2011.

(2) ಭಾರತ ಸರ್ಕಾರದ ಪತ್ರ ಸಂಖ್ಯೆ: ಎಫ್. 52–69/2011–ಎಲ್‌ಡಿಟಿ(ವಿಸಿ) ದಿನಾಂಕ: 30.06.2011.

(3) ಆಯುಕ್ತರು, ಪಶುಪಾಲನಾ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪಸಂ:ಯೋಜನೆ–2:ವಿವ–04:2011–12 ದಿನಾಂಕ: 30.08.2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿ (50:50) ಪ್ರೊಫೆಷನಲ್ ಎಫಿಷಿಯನ್ಸಿ ಡೆವಲಪ್‌ಮೆಂಟ್ ಕಾರ್ಯಕ್ರಮಕ್ಕಾಗಿ 2011–12ನೇ ಸಾಲಿನ ಆಯವ್ಯಯದಲ್ಲಿ ರೂ. 90.00 ಲಕ್ಷ (ರಾಜ್ಯದ ಪಾಲು ರೂ. 45.00 ಲಕ್ಷ+ಕೇಂದ್ರ ಪಾಲು ರೂ. 45.00 ಲಕ್ಷ ಒಟ್ಟು ರೂ. 90.00 ಲಕ್ಷ)ಗಳನ್ನು ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸದರಿ ಯೋಜನೆಯಡಿ ಕೇಂದ್ರ ಸರ್ಕಾರ ಪ್ರೊಫೆಷನಲ್ ಎಫಿಷಿಯನ್ಸಿ ಡೆವಲಪ್‌ಮೆಂಟ್ ಕಾರ್ಯಕ್ರಮಕ್ಕಾಗಿ ರೂ. 15.00 ಲಕ್ಷಗಳನ್ನು ಬಿಡುಗಡೆ ಮಾಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು 2011–12ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಡಿ ಪ್ರೊಫೆಷನಲ್ ಎಫಿಷಿಯನ್ಸಿ ಡೆವಲಪ್‌ಮೆಂಟ್ ಕಾರ್ಯಕ್ರಮಕ್ಕಾಗಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ರೂ. 15.00 ಲಕ್ಷಗಳಿಗೆ ಅನುಗುಣವಾಗಿ ರಾಜ್ಯ ಸರ್ಕಾರದ ಪಾಲು ರೂ. 15.00 ಲಕ್ಷಗಳನ್ನು ಸೇರಿಸಿ ಒಟ್ಟು ರೂ. 30.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 307 ಪಅಸೇ 2011, ಬೆಂಗಳೂರು, ದಿನಾಂಕ : 22.09.2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ 2011–12ನೇ ಸಾಲಿನ ಆಯವ್ಯಯದಲ್ಲಿ ಕೇಂದ್ರ ಪುರಸ್ಕೃತ ಯೋಜನೆ (ಕೇಂದ್ರ 50% ಮತ್ತು ರಾಜ್ಯ 50%) ಯಡಿ ಪ್ರೊಫೆಷನಲ್ ಎಫಿಷಿಯನ್ಸಿ ಡೆವಲಪ್‌ಮೆಂಟ್ ಕಾರ್ಯಕ್ರಮಕ್ಕಾಗಿ ಒದಗಿಸಿರುವ ರೂ. 90.00 ಲಕ್ಷಗಳ ಅನುದಾನದಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಷೇರು ರೂ. 15.00 ಲಕ್ಷಗಳಿಗನುಗುಣವಾಗಿ ರಾಜ್ಯ ಸರ್ಕಾರದ ಪಾಲು ರೂ. 15.00 ಲಕ್ಷಗಳನ್ನು ಸೇರಿಸಿ ಒಟ್ಟು ರೂ. 30.00 ಲಕ್ಷ (ಮುವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು 2011–12ನೇ ಯೋಜನಾ ಲೆಕ್ಕ ಶೀರ್ಷಿಕೆ "2403–00–101–0–17ರ ಉದ್ದೇಶಿತ ಶೀರ್ಷಿಕೆ 101 (ಸಹಾಯಾನುದಾನ)" ಅಡಿ ಬಿಡುಗಡೆ ಮಾಡಲಾಗಿದೆ.

2. ನಿಬಂಧಕರು, ಕರ್ನಾಟಕ ಪಶುವೈದ್ಯಕೀಯ ಪರಿಷತ್ತು, ಬೆಂಗಳೂರು ಇವರು ಹಣ ಸ್ವೀಕೃತಿ ರಸೀದಿಯ ಮೇಲೆ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರಿಂದ ಮೇಲು ರುಜು ಪಡೆದು ಖಜಾನೆಯಿಂದ ಹಣ ಪಡೆಯತಕ್ಕದ್ದು.

3. ಸದರಿ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸಿಕೊಂಡು ಉಪಯೋಗಿತಾ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 09 ಟಿಎಫ್‌ಪಿ 2004 ದಿನಾಂಕ: 17.08.2004ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ)

ಪಿ.ಆರ್. 2516

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಹಾಲಿ ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರದ ಮಂಜೂರಾತಿ ಕುರಿತು.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ಎಂ–23/ಸಿಆರ್–05/2010 ಉಡುಪಿ, ದಿನಾಂಕ 22.06.2011.
2. ತನಿಖಾಧಿಕಾರಿಯ ಅಂತಿಮ ವರದಿ.
3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಪಂಚರ ಕೋರಿಕೆ ಪತ್ರಗಳು, ವಹಿಸಿಕೊಡುವ ಮತ್ತು ಸೊತ್ತು ಸ್ವಾಧೀನತಾ ಮಹಜರ್‌ಗಳು, ಕೃತ್ಯ ನಡೆದ ಸ್ಥಳದ ಕರಡು ನಕಾಶೆ, ಆರೋಪಿತ ದಸ್ತಗಿರಿ ಮಾಹಿತಿ, ನೋಟುಗಳ ನಂಬರ್ ಬರೆದುಕೊಂಡಿರುವ ಹಾಳೆ, ಆಪಾದಿತರ ಸ್ವ ಇಚ್ಛಾ ಹೇಳಿಕೆಗಳು, ಸ್ಥಳ ನಕಾಶೆ, ರಾಸಾಯನಿಕ ವರದಿ, ಸೊತ್ತು ಸ್ವಾಧೀನತಾ ಮಹಜರು ಸಮಯ ಆಪಾದಿತರ ಕಛೇರಿಯಿಂದ ವಶಪಡಿಸಿಕೊಂಡ ದಾಖಲಾತಿಗಳು, ತನಿಖಾ ಕಾಲದ ವಿವಿಧ ಹಂತಗಳಲ್ಲಿ ತೆಗೆಯಿಸಿದ ಫೋಟೋಗಳು.

**ಪ್ರಸ್ತಾವನೆ :**

ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ವಿರುದ್ಧ ಅ.ಕ್ರ. 05/2010, ದಿನಾಂಕ 01–09–2010 ರಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಉಡುಪಿ ಇವರು ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರ ದಿನಾಂಕ 22.06.2011 ರಲ್ಲಿ ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ರ ಅನ್ವಯ ಮಂಜೂರಾತಿ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಫಿರ್ಯಾದುದಾರರಾದ ಶ್ರೀ ಎಸ್. ಸತೀಶ್ ಕುಮಾರ್, 29 ವರ್ಷ, ಬಿನ್ ಜಿ. ಶೀನ ಮರಕಾಲ, ಓಂಶಾಂತಿ ನಿವಾಸ, ಮೆಜೆಸ್ಟಿಕ್ ಹಾಲ್ ಕೋಟೇಶ್ವರ ಎದುರುಗಡೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ ಇವರ ಫಿರ್ಯಾದು ದಿನಾಂಕ 01–09–2010.
2) ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ, ಉಡುಪಿ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ : 05/2010.
3) ವಹಿಸಿಕೊಡುವ ಮಹಜರು ದಿನಾಂಕ 01–09–2010.
4) ಸೊತ್ತು ಸ್ವಾಧೀನತಾ ಮಹಜರ್ ದಿನಾಂಕ 01–09–2010.
5) ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ನಂ. ಎಂ.ಆರ್.ಎಲ್./22/10–11, ದಿನಾಂಕ 26–10–2010.
6) ಸಹಾಯಕ ಅಭಿಯಂತರರು, ಪಿ.ಡಬ್ಲ್ಯೂ.ಡಿ. ನಂ.2, ಪಿ.ಡಬ್ಲ್ಯೂ.ಡಿ. ವಿಭಾಗ, ಕುಂದಾಪುರ ಇವರು ತಯಾರಿಸಿದ ಕೃತ್ಯ ನಡೆದ ಸ್ಥಳದ ನಕಾಶೆ ದಿನಾಂಕ 16–11–2010.
7) **ಸಾಕ್ಷಿಗಳ ಹೇಳಿಕೆಗಳು :–**
   i. ಶ್ರೀ ಎಸ್. ಸತೀಶ್ ಕುಮಾರ್, ಬಿನ್ ಜಿ. ಶೀನ ಮರಕಾಲ, 29 ವರ್ಷ, ಓಂಶಾಂತಿ ನಿವಾಸ, ಮೆಜೆಸ್ಟಿಕ್ ಹಾಲ್ ಕೋಟೇಶ್ವರ ಎದುರುಗಡೆ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ.
   ii. ಶ್ರೀ ವೆಂಕಟ್ರಮಣಯ್ಯ ಬಿನ್ ದಿ॥ ವೆಂಕಟಯ್ಯ, 39 ವರ್ಷ, ಪ್ರಥಮ ದರ್ಜೆ ಸಹಾಯಕ, ನಗರ ಸಭೆ, ಉಡುಪಿ.
   iii. ಶ್ರೀ ಕೆ. ಸದಾನಂದ ಶೆಟ್ಟಿ ಬಿನ್ ದಿ॥ ಕೆ. ತಿಮ್ಮಪ್ಪ ಶೆಟ್ಟಿ, 54 ವರ್ಷ, ಪ್ರಥಮ ದರ್ಜೆ ಸಹಾಯಕ, ನಗರ ಸಭೆ, ಉಡುಪಿ.
   iv. ಶ್ರೀ ಮಾಣಿ ಗೋಪಾಲ, ಅಧ್ಯಕ್ಷರು, ನಗರ ಯೋಜನಾ ಪ್ರಾಧಿಕಾರ, ಕುಂದಾಪುರ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ.
   v. ಶ್ರೀ ಉದಯ ಕುಮಾರ್, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ನಂ. 2, ಕುಂದಾಪುರ ಉಪ ವಿಭಾಗ ಕಛೇರಿ, ಉಡುಪಿ ಜಿಲ್ಲೆ.
   vi. ಶ್ರೀಮತಿ ರಾಜಲಕ್ಷ್ಮಿ, ಸಹಾಯಕ ರಾಸಾಯನಿಕ ವಿಶ್ಲೇಷಕರು, ರಾಸಾಯನಿಕ ವಿಶ್ಲೇಷಕರ ಕಛೇರಿ, ಮಂಗಳೂರು ವಲಯ, ಮಂಗಳೂರು.
   vii. ಶ್ರೀ ಜಯರಾಜ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಹೆಚ್ಚುವರಿ), ಉಡುಪಿ ಜಿಲ್ಲೆ.
   viii. ಶ್ರೀ ಸುಬ್ರಹ್ಮಣ್ಯ ಕೆ. ವಡ್ಡರ್, ನಗರ ಯೋಜನಾ ಸದಸ್ಯರು, ನಗರ ಯೋಜನಾ ಪ್ರಾಧಿಕಾರ ಕಛೇರಿ, ಕುಂದಾಪುರ ತಾಲ್ಲೂಕು.
   ix. ಶ್ರೀ ಅರುಣಪ್ರಭ, ತಹಶೀಲ್ದಾರರು, ಕುಂದಾಪುರ ತಾಲ್ಲೂಕು.
   x. ಶ್ರೀ ದಿವಾಕರ ಶರ್ಮಾ, ಪೊಲೀಸ್ ಹೆಡ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ ಠಾಣೆ, ಉಡುಪಿ.
   xi. ಶ್ರೀ ರಾಮಚಂದ್ರ ಭಟ್, ಪೊಲೀಸ್ ಹೆಡ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ ಠಾಣೆ, ಉಡುಪಿ.

xii. ಶ್ರೀ ದಿವಾಕರ ಜೆ. ಸುವರ್ಣ, ಪೊಲೀಸ್ ಹೆಡ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ ಠಾಣೆ, ಉಡುಪಿ.

xiii. ಶ್ರೀ ಜಿ. ಶ್ರೀಧರ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ ಠಾಣೆ, ಉಡುಪಿ.

xiv. ಶ್ರೀ ಉಮೇಶ್, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ ಠಾಣೆ, ಉಡುಪಿ.

xv. ಶ್ರೀ ಬಿ.ಪಿ. ದಿನೇಶ್ ಕುಮಾರ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಉಡುಪಿ.

(8) ಆಪಾದಿತರಾದ ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರು ಸಮಜಾಯಿಷಿ ಹೇಳಿಕೆ ದಿನಾಂಕ 01-09-2010.

ತನಿಖಾಧಿಕಾರಿಗಳಾದ ಶ್ರೀ ಬಿ.ಪಿ. ದಿನೇಶ್ ಕುಮಾರ್, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಉಡುಪಿ ಇವರು ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ, ಉಡುಪಿ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 05/2010 ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಯಲ್ಲಿ 13(2)ರ ರಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರು ಫಿರ್ಯಾದುದಾರರಾದ ಶ್ರೀ ಎಸ್. ಸತೀಶ್ ಕುಮಾರ್ ಇವರು ಕುಂದಾಪುರ ತಾಲ್ಲೂಕಿನ ಹಂಗಳೂರು ಗ್ರಾಮದ ಮಹಮ್ಮದ್ ಯೂಸುಫ್ ಎಂಬುವವರಿಗೆ ಸಂಬಂಧಿಸಿದ ಹಂಗಳೂರು ಗ್ರಾಮದ ಸ.ನಂ. 68/10 ಬಿಪಿ 1 ರಲ್ಲಿನ 0.08 ಎಕರೆ ಜಾಗಕ್ಕೆ ಸಂಬಂಧಿಸಿದಂತೆ ಜನರ್ ಪವರ್ ಆಫ್ ಅಟಾರ್ನಿಯನ್ನು ಹೊಂದಿದ್ದರು. ಸದರಿ ಜಾಗದಲ್ಲಿ ಮಹಮ್ಮದ್ ಯೂಸುಫ್‌ರವರು ಆರ್.ಸಿ.ಸಿ. ಮನೆಯನ್ನು ನಿರ್ಮಿಸಲು ಅವರ ಪರವಾಗಿ ಫಿರ್ಯಾದುದಾರರು ಭೂಪರಿವರ್ತನೆಗೆ ನಿರಾಕ್ಷೇಪಣಾ ಪತ್ರ (ಎನ್.ಓ.ಸಿ.) ಪಡೆಯುವ ಬಗ್ಗೆ ಕುಂದಾಪುರ ನಗರ ಯೋಜನಾ ಪ್ರಾಧಿಕಾರಕ್ಕೆ 2010ರ ಫೆಬ್ರವರಿ ತಿಂಗಳಲ್ಲಿ ಅರ್ಜಿಯನ್ನು ಸಲ್ಲಿಸಿದ್ದರು. ಫಿರ್ಯಾದುದಾರರು ದಿನಾಂಕ 17-04-2010ರಂದು ನಗರ ಯೋಜನಾ ಪ್ರಾಧಿಕಾರದ ಕಾರ್ಯದರ್ಶಿಯಾಗಿದ್ದ ಶ್ರೀ ಅಶೋಕ್ ಕುಮಾರ್, ಇವರಲ್ಲಿಗೆ ಹೋಗಿ ವಿಚಾರಿಸಿದಾಗ ನೋಡುವ ಮಾಡುವ ಎಂದು ಹೇಳಿ ನಂತರದ ದಿನಗಳಲ್ಲಿ ನಿರಾಕ್ಷೇಪಣಾ ಪತ್ರ ನೀಡಬೇಕಾದರೆ ಅದಕ್ಕೆ ಖರ್ಚು ಇರುತ್ತದೆ ಎಂದು ಹೇಳಿ ರೂ. 3,000/- ನೀಡುವಂತೆ ತಿಳಿಸಿದ್ದರು. ಫಿರ್ಯಾದುದಾರರು ಆಗಿಂದಾಗ್ಗೆ ಶ್ರೀ ಅಶೋಕ್ ಕುಮಾರ್ ರವರು ಕಚೇರಿಯಲ್ಲಿದ್ದ ದಿನಗಳಲ್ಲಿ ಹೋಗಿ ವಿಚಾರಿಸಿದಾಗ ಅವರು ನಿರಾಕ್ಷೇಪಣಾ ಪತ್ರ ನೀಡಿರುವುದಿಲ್ಲ. ಶ್ರೀ ಅಶೋಕ್ ಕುಮಾರ್ ರವರು ತಾನು ತಿಳಿಸಿದ ಮೊತ್ತವನ್ನು ಕೊಟ್ಟರೆ ಎನ್.ಓ.ಸಿ. ಕೊಡುವುದಾಗಿ ಹೇಳಿ ಮೊತ್ತವನ್ನು ದಿನಾಂಕ 01-09-2010 ರಂದು ತೆಗೆದುಕೊಂಡು ಬರುವಂತೆ ತಿಳಿಸಿದ್ದರು. ಫಿರ್ಯಾದುದಾರರಿಗೆ ಲಂಚದ ಹಣ ರೂ. 3,000/- ಅನ್ನು ಕೊಟ್ಟು ತನ್ನ ಕೆಲಸ ಮಾಡಿಸಿಕೊಳ್ಳಲು ಇಚ್ಛೆ ಇಲ್ಲದ ಕಾರಣ ಶ್ರೀ ಅಶೋಕ್ ಕುಮಾರ್ ರವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ವ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 01-09-2010 ರಂದು ಉಡುಪಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿದ್ದು, ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರು ಅಕ್ರಮ ಸಂಭಾವನೆಯಾದ ರೂ. 3,000/- ಗಳನ್ನು ಕುಂದಾಪುರ ಪುರಸಭೆ ಕಛೇರಿಯಲ್ಲಿ ಫಿರ್ಯಾದುದಾರರಿಂದ ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಎರಡೂ ಕೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 3,000/- ಗಳನ್ನು ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರ ಪ್ಯಾಂಟಿನ ಬಲ ಜೇಬಿನಿಂದ ಉಡುಪಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಅಪರ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತನಿಖಾ ವರದಿಯೊಂದಿಗೆ ಸರ್ಕಾರಕ್ಕೆ ಕಳುಹಿಸಲಾದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು, ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಫಿರ್ಯಾದುದಾರರಿಂದ ಭೂಪರಿವರ್ತನೆಗೆ ನಿರಾಕ್ಷೇಪಣಾ ಪತ್ರ (ಎನ್.ಓ.ಸಿ.) ನೀಡಲು ರೂ. 3,000/- ಗಳ ಬೇಡಿಕೆ ಇಟ್ಟು ರೂ. 3,000/- ಗಳನ್ನು ಕೇಳಿ ಪಡೆದು, ರೂ. 3,000/- ಗಳನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಲುಕಿ ನಂತರ ಬಂಧನಕ್ಕೊಳಗಾಗಿರುವ ಅಂಶವನ್ನು ಸರ್ಕಾರವು ಗಮನಿಸಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಗಗೊಳಿಸಲು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ

ಕಛೇರಿ, ಉಡುಪಿ ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 190 ನಯೋಸೇ 2010, ಬೆಂಗಳೂರು, ದಿನಾಂಕ 07ನೇ ಅಕ್ಟೋಬರ್ 2011**

ಆರೋಪಿಯಾದ ಶ್ರೀ ಅಶೋಕ್ ಕುಮಾರ್, ನಗರ ಯೋಜಕರು, ಹಾಗೂ ಪ್ರಭಾರ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಉಡುಪಿ ಮತ್ತು ಕುಂದಾಪುರ ನಗರ ಯೋಜನಾ ಪ್ರಾಧಿಕಾರ ಕಛೇರಿ, ಉಡುಪಿ, ಹಾಲಿ ನಗರ ಯೋಜಕರು, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ಇವರನ್ನು ಹುದ್ದೆಯಿಂದ ತೆಗೆದು ಹಾಕುವ/(ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಅಶೋಕ್ ಕುಮಾರ್ ಇವರನ್ನು ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 7, 13(1) (ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 18 ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಈ ದಿನ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ರಮೇಶ್ ಬಾಬು,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.ನಂ. 2517

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಗೆ ಹೊಸದಾಗಿ ಸೃಜಿಸಲಾಗಿರುವ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 711 ಎಲ್‌ಜಿಬಿ 2009 (ಪಿ), ದಿನಾಂಕ 04–06–2010.
2. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಪತ್ರ ಸಂಖ್ಯೆ : ಇಎಸ್‌ಟಿ (1) ಸಿಆರ್ 56/2010–11, ದಿನಾಂಕ 17–02–2011.

**ಪ್ರಸ್ತಾವನೆ :**

ಬೆಂಗಳೂರು ನಗರ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಗೆ ಬೆಂಗಳೂರು ಉತ್ತರ ಮತ್ತು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು ಪೂರ್ವ ತಾಲ್ಲೂಕು ಹಾಗೂ ಆನೇಕಲ್ ತಾಲ್ಲೂಕುಗಳಿಗೆ ತಲಾ ಒಂದು ಹುದ್ದೆಯಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 136(3) ರಡಿಯಲ್ಲಿನ ಪ್ರಕರಣಗಳ ವಿಲೇವಾರಿ ಸಲುವಾಗಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಹೊಸದಾಗಿ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಯನ್ನು ಸೃಜಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಂತೆ ಆದೇಶ ಹೊರಡಿಸಲಾಗಿದೆ.

ಈಗ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಹೊಸದಾಗಿ ಸೃಜಿಸಲಾದ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಯಲ್ಲಿ ಕೆ.ಎ.ಎಸ್. ವೃಂದದ ಆಯ್ಕೆ ಶ್ರೇಣಿಯ 3 ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಬೆಂಗಳೂರು ಉತ್ತರ ಮತ್ತು ಉತ್ತರ (ಅಪರ) ತಾಲ್ಲೂಕಿನಲ್ಲಿ ಕ್ರಮವಾಗಿ 1555 ಮತ್ತು 2015 ಪ್ರಕರಣಗಳು, ಬೆಂಗಳೂರು ಪೂರ್ವ ತಾಲ್ಲೂಕಿನಲ್ಲಿ 410 ಪ್ರಕರಣಗಳು ಹಾಗೂ ಆನೇಕಲ್ ತಾಲ್ಲೂಕಿನಲ್ಲಿ ಒಟ್ಟು 1380 ಪ್ರಕರಣಗಳು ಬಾಕಿ ಇದ್ದು, 3 ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 136(3) ರಡಿಯಲ್ಲಿ ಒಟ್ಟು 5860 ಪ್ರಕರಣಗಳು ವಿಲೇವಾರಿಗೆ ಬಾಕಿ ಇದ್ದು, ಇನ್ನು ಒಂದು ವರ್ಷದ ಅವಧಿಗೆ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಗಳನ್ನು ಮುಂದುವರೆಸುವಂತೆ ಕೋರಿರುತ್ತಾರೆ.

ಸದರಿ ಜಮೀನು ಒತ್ತುವರಿ ತೆರವುಗೊಳಿಸುವುದು ಬಹಳ ಮಹತ್ವದ ವಿಷಯವಾಗಿರುತ್ತದೆ. ಈಗ ಹಾಲಿ ಬಾಕಿ ಇರುವ 5860 ಪ್ರಕರಣಗಳನ್ನು ಪರಿಶೀಲಿಸಿ ವಿಲೇಗೊಳಿಸಲು ಸದರಿ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಗಳನ್ನು ಮತ್ತೊಂದು ವರ್ಷದವರೆಗೆ ಮುಂದುವರೆಸುವ ಅವಶ್ಯಕತೆ ಇರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 290 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ 03ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 711 ಎಲ್‌ಜಿಬಿ 2009 (ಪಿ), ದಿನಾಂಕ 04–06–2010ರ ಆದೇಶದಲ್ಲಿ ಹೊಸದಾಗಿ ಸೃಜಿಸಲಾಗಿರುವ 3 ವಿಶೇಷ ಜಿಲ್ಲಾಧಿಕಾರಿಗಳ ಹುದ್ದೆಗಳನ್ನು ದಿನಾಂಕ 03–06–2011 ರಿಂದ ಮುಂದಿನ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 400 ವೆಚ್ಚ–7/2011, ದಿನಾಂಕ 28.05.2011 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್,**
ಸರ್ಕಾರದ ಜಂಟಿ ಕಾರ್ಯದರ್ಶಿ,
ಕಂದಾಯ ಇಲಾಖೆ.
(ಭೂ.ಮಂ, ಭೂ. ಕಂ. ಮತ್ತು ಸೇವೆಗಳು)

ಪಿ.ಆರ್.ನಂ. 2518

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ನಗರೂರು ಗ್ರಾಮದ ಸ.ನಂ. 112ರಲ್ಲಿ 10.00 ಎಕರೆ ಜಮೀನನ್ನು ವಿಶ್ವ ಗಾಣಿಗರ ಸಮುದಾಯ ಟ್ರಸ್ಟ್‌ಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಪತ್ರ ಸಂಖ್ಯೆ ಎಲ್‌ಎನ್‌ಡಿ (ಎನ್) ಸಿಆರ್ 28/11–12, ದಿನಾಂಕ : 28–07–2011.

**ಪ್ರಸ್ತಾವನೆ :**

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ನಗರೂರು ಗ್ರಾಮದ ಸ.ನಂ. 112ರಲ್ಲಿ ಒಟ್ಟು 29.00 ಎಕರೆ ಸರ್ಕಾರಿ ಗೋಮಾಳ ಜಮೀನಿದ್ದು, ಈ ಪೈಕಿ 16.00 ಎಕರೆ ಜಮೀನನ್ನು ಈಗಾಗಲೇ ಶ್ರೀ ಆದಿಚುಂಚನಗಿರಿ ಟ್ರಸ್ಟ್‌ಗೆ ವಾರ್ಷಿಕ ರೂ. 1000/–ದಂತೆ 30 ವರ್ಷಗಳಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿರುತ್ತದೆ. ಈ ಸರ್ವೆ ನಂಬರಿನಲ್ಲಿ ಬಾಕಿ ಉಳಿದಿರುವ 13.00 ಎಕರೆ ಪೈಕಿ (ಪಶ್ಚಿಮದ ಕಡೆಗೆ 30 ಅಡಿ ರಸ್ತೆ ಬಿಟ್ಟು) ದಕ್ಷಿಣ ದಿಕ್ಕಿನ ಕಡೆಯಿಂದ ಹಾಲಿ ಉಳಿದಿರುವ ಜಮೀನನ್ನು ಸೇರಿಸಿ 16.00 ಎಕರೆ ಜಮೀನನ್ನು ಮಾರ್ಪಡಿಸಿ ಶ್ರೀ ಆದಿಚುಂಚನಗಿರಿ ಟ್ರಸ್ಟ್‌ಗೆ ನೀಡಿರುವ ಗುತ್ತಿಗೆಯನ್ನು ಮುಂದುವರೆಸಿ ಉತ್ತರದ ಕಡೆಗೆ ಬಾಕಿ ಉಳಿದಿರುವ 10.00 ಎಕರೆ ಜಮೀನನ್ನು ವಿಶ್ವ ಗಾಣಿಗರ ಸಮುದಾಯ ಟ್ರಸ್ಟ್‌ಗೆ ಹಾಗೂ (ಸುತ್ತಲೂ ಬರುವ ರಸ್ತೆಗೆ) ಉಳಿದ 3.00 ಎಕರೆ ಜಮೀನನ್ನು ಸಾರ್ವಜನಿಕ ರಸ್ತೆಗಾಗಿ ಕಾಯ್ದಿರಿಸಲು ಸರ್ಕಾರಕ್ಕೆ ವರದಿ ಮಾಡಿದ್ದಾರೆ.

2. ವಿಶ್ವ ಗಾಣಿಗರ ಸಮುದಾಯ ಟ್ರಸ್ಟ್‌ಗೆ ಗುತ್ತಿಗೆ ಆಧಾರದ ಮೇಲೆ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಜಮೀನು ಗೋಮಾಳ ಜಮೀನಾಗಿದ್ದು, ನಗರ ಪ್ರದೇಶದ ವ್ಯಾಪ್ತಿಗೆ ಒಳಪಡುತ್ತದೆ. ನಗರ ಪ್ರದೇಶದ ವ್ಯಾಪ್ತಿಗೆ ಒಳಪಡುವ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97ಕ್ಕೆ ತಿದ್ದುಪಡಿ ತಂದು 97(5)ರನ್ವಯ ವಿಲೇ ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 367 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ : 20–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, "ಬೆಂಗಳೂರು ಉತ್ತರ ತಾಲ್ಲೂಕು, ದಾಸನಪುರ ಹೋಬಳಿ, ನಗರೂರು ಗ್ರಾಮದ ಸ.ನಂ.112ರಲ್ಲಿನ 10.00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(5)(1)ನ್ನು ಸಡಿಲಿಸಿ ವಿಶ್ವ ಗಾಣಿಗರ ಸಮುದಾಯ ಟ್ರಸ್ಟ್ ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)(ಎ) ರನ್ವಯ ಶೈಕ್ಷಣಿಕ ಉದ್ದೇಶಕ್ಕಾಗಿ ಸದರಿ ನಿಯಮಾವಳಿಗಳ ನಿಯಮ 19(3) ರನ್ವಯ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ವಾರ್ಷಿಕ ಗುತ್ತಿಗೆ ದರವನ್ನು ಪ್ರತಿ ಎಕರೆಗೆ ರೂ. 1000/– (ಒಂದು ಸಾವಿರ ರೂಪಾಯಿಗಳು ಮಾತ್ರ) ರಂತೆ ನಿಗದಿ ಪಡಿಸಿ ಮತ್ತು ಸದರಿ ಗುತ್ತಿಗೆ ದರವನ್ನು ಪ್ರತಿ 2 ವರ್ಷಗಳಿಗೊಮ್ಮೆ ಶೇ. 10ರಷ್ಟು ಹೆಚ್ಚಿಸುವ ಷರತ್ತಿಗೊಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೀತಾ ರಮೇಶ್**

ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 2519 ಕಂದಾಯ ಇಲಾಖೆ (ಭೂ.ಮಂ, ಭೂ.ಕಂ., ಮತ್ತು ಸೇವೆಗಳು)

## REVENUE SECRETARIAT

**Sub :** Preparation of National Population Register in Karnataka-Appointment of Local Registrars of Citizen Registration- Reg.

**Read :** 1. Notification No. RD 02 ETC 2009 Dated : 17-04-2010 of Government of Karnataka.

2. D.O. Letter No. CEN/7/KAR/2009 dated 23-04-2009 of the Director of Census Operations, Karnataka, Bangalore.

**Preamble:**

The Preparation of National Population Registrar (NPR) and the field work for data collection in Karnataka has been declared vide GOK Notification read at (1) above, The field work for NPR for data collection of usual residents has commenced throughout the State from 15th April 2010.

The Director of Census Operations, Karnataka in his letter read at (2) above has requested to issue an order designating the Local Registrars in citizenship Registration for the Project of preparing National Population Registrar in the State.

Hence the Order.

**GOVERNMENT ORDER NO. RD 102 ETC 2010, BANGALORE, DATED 26-09-2011.**

As defined under Rule 2 of Citizenship (Registration of Citizen and Issue of National Identity Cards) Rules, 2003, the Village Accountants (VA) in Rural areas and in Urban areas the officials who are appointed as Birth and Death Registrars are appointed Local Registrars of Division Registration for the Project of preparation of Population Registrar within their respective jurisdictions.

By Order and in the name of the Governor of Karnataka,

**S. Kathyayani Devi**

Desk Officer

*P.R. No. 2520* Directorate of Social Security & Pensions

Revenue Department.

## ENERGY SECRETARIAT

**Sub :** Enhancement of wind power capacity from 24.15 MW to 31.50 MW in favour of M/s Suzlon Infrastructure Limited-reg.

**Read :**
1. Government Order No. EN 299 NCE 2006, dated 16-10-2006.
2. Letter No. KRED/08/SIL-Nerabenchi (24.15 to 31.50 MW)/2011/2485 dated :22/23-08-2011 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1), sanction has been accorded for allottment of 24.15 MW capacity wind power project in favour of M/s Suzlon Infrastructure Limited at Kavadimatti, Sarur, Nerabenchi, Arasana and Hiremurali villages of Bijapur District.

In the Letter read at (2) above, the Managing Director, Karnataka Renewable Energy Development Limited, Bangalore, has recommended to enhance the allotted wind power capacity from 24.15 MW to 31.50 MW in favour of M/s Suzlon Infrastructure Limited at Kavadimatti, Sarur, Nerabenchi, Arasana and Hiremurali villages in Muddebihal Taluk of Bijapur District.

The proposal has been examined in detail, hence the following order :-

**GOVERNMENT ORDER NO. EN 347 NCE 2011, BANGALORE, DATED 16-09-2011.**

Government accords approval for enhancement of wind power capacity from 24.15 MW to 31.50 MW in favour of M/s Suzlon Infrastructure Limited at Kavadimatti, Sarur, Nerabenchi, Arasana and Hiremurali villages in Muddebihal Taluk of Bijapur District as detailed below and subject to the following conditions :-

| Geographical Area details | Sanctioned capacity in MW | Enhancement proposed in Stage-I in MW | No. of WTGs & rating in KW |
|---|---|---|---|
| Identified area is large plateau spread in the Northwest Southeast direction held in between Sarur Tanda and Hire Muarli and has a gentle elevation comparing to surrounding area. The average elevation of the area is about 565m. The proposed area is covered in the following Geographical Co-ordinates :<br>Latitude : $16^0$ 15’19”-$16^0$ 20’ 0”N<br>Longitude : $76^0$ 07’58”-$76^0$ 15’ 0”E<br>Ridge peaks : 574.9, 559, 556, 563, 578 & 600m Amsl. | 24.15 | 7.35 | 31.50 MW (15x2100) |

1. The Company should commission the project by 31.03-2012 and KREDL should obtain an undertaking from the developer to this extent.
2. The Company should obtain the consent of the private land owner.
3. The Government reserves the right to Cancel/Modify this order.

The other terms and Conditions of the allotment Government Order shall IPSO FACTO be applicable.

By Order and in the name of Governor of Karnataka,
**SURESH. B. KRISHNAPPANAVAR**
Under Secretary to Government,
Energy Department.

P.R. No. 2521

## ENERGY SECRETARIAT

**Sub :** Transfer of 1.25 MW (K 554) wind power capacity in favour of M/s Beta Wind Farm Private Limited-reg.

**Read :**
1. Government Order No. EN 59 NCE 2004, dated : 08-03-2004.
2. Government Order No. EN 393 NCE 2005, dated : 28-12-2005.
3. Government Order No. EN 180 NCE 2007, dated : 15-05-2007.
4. Government Order No. EN 145 NCE 2011, dated : 11-03-2011.
5. Letter No. KRED/08/BWFPL-1.25 MW (K-554)-K.S.S./2011/2612 dated : 02/03-09-2011 received from the managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 125 MW capacity wind power project at Shimoga, Bellary, Chitradurga, Chikkamagalur, Tumkur and Dharwad Districts to M/s Sarjan Realities Limited.

In the Government Order read at (2) above, sanction has been accorded for enhancement of wind power capacity from 33 MW to 44.4 MW Kalavi Ranganagudda, Maddapura, Gangavannadasara State Forest, Horogoppa in Shimoga District to M/s Sarjan Realities Limited.

In the Government Order read at (3) above, sanction has been accorded for enhancement of wind power capacity from 44.4 MW to 111 MW at Gangavanasara and Kudurekonda areas in Shimoga and Davanagere Districts to M/s Sarjan Realities Limited.

In the Government Order read at (4) above, sanction has been accorded for transfer of 1.25 MW wind power capacity in favour of M/s K.S. Subbiah Pillai and Company (India) Limited from out of the sanctioned 111.00 MW capacity to M/s Sarjan Realilties Ltd., at Sy. No. 14, Erekatte village, Shikaripura Taluk, Shimoga District.

The Managing Director, Karnataka Renewable Energy Development Limited, Bangalore in his letter read at (5) above, has recommended to the Government for transfer of 1.25 MW (K554) wind power capacity in favour of M/s Beta Wind Farm Private Limited from 1.25 MW transferred to M/s Subbiah Pillai and Company (India ) Limited at Erekatte Village, Shikaripura Taluk, Shimoga District.

The proposal has been examined in detail and hence the following order :-

**GOVERNMENT ORDER NO. EN 358 NCE 2010, BANGALORE, DATED 24-09-2011.**

Government accords approval for transfer of 1.25 MW (K 554) wind power capacity in favour of M/s Beta Wind Farm Private Limited from 1.25 MW transferred capacity of M/s K.S. Subbiah Pillai and Company (India) Limited at Erekatte Village, Shikaripura Taluk, Shimoga District as detailed below and subject to the following conditions.

| Village Name | Taluk & District | MW | Land Survey Number | No. of WTGs | Extent in Land (Ac) | WTG Number |
|---|---|---|---|---|---|---|
| Erekatte | Shikaripura/Shimoga | 1.25 | 14 | 1 No. | 2 Acre per WTG | K 554 |

1. M/s Beta Wind Farm Private Limited shall execute an agreement with Government within 45 (forty five) days from the date of issue of this order.
2. M/s Beta Wind Farm Private Limited is permitted to enter into Wheeling and Banking with concerned ESCOMs/KPTCL.
3. The Company shall commission the project by October 2011 and give and undertaking to that effect.
4. The Government reserves the right to Cancel/modify this Order.

The other terms and conditions of the Government Order read at (1) above shall IPSO FACTO be applicable.

By Order and in the name of the Governor of Karnataka,

P.R. No. 2522

**SURESH. B. KRISHNAPPANAVAR**
Under Secretary to Government,
Energy Department.

## ENERGY SECRETARIAT

**Sub :** Transfer of 2.1 MW wind power capacity in favour of M/s Rajasthan Gum Private Limited-reg.

**Read :**
1. Government Order No. EN 191 NCE 2005, dated : 19-08-2005.
2. Government Order No. EN 100 NCE 2005, dated : 30-08-2005.
3. Government Order No. EN 178 NCE 2008, dated : 24-12-2008.
4. Letter No. KRED/08/RGPL-2.1 MW (SND-107)-SIL/2011/2470 dated : 19-08-2011 received from the managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded implement of 82.6 MW capacity wind power project at Raichur and Bellary District to M/s Suzlon Developers Limited.

In the Government Order read at (2) above, sanction has been accorded for change of company's name from M/s Suzlon Developers Limited and M/s Suzlon Developers Private Limited to M/s Suzlon Infrastructure Limited.

In the Government Order read at (3) above, sanction has been accorded for enhancement of wind power capacity from 15.60 MW (part capacity of 82.6 MW) to 40.25 MW of M/s Suzlon Infrastructure Limited at Kurgod Sindagere site, Bellary District.

The Managing Director, Karnataka Renewable Energy Development Limited, Bangalore in his letter read at (4) above, has recommended to the Government for transfer of 2.1 MW wind power capacity in favour of M/s Rajasthan Gum Pvt. Ltd., from out of the 40.25 MW capacity sanctioned in favour of M/s Suzlon Infrastructure Limited at Sindigiri site near Kurugodu Village, in land Sy. No. 472 of Bellary Taluk, Bellary District.

The proposal has been examined in detail and hence the following order :-

**GOVERNMENT ORDER NO. EN 337 NCE 2011, BANGALORE, DATED 13-09-2011.**

Government accords approval for transfer of 2.1 MW wind power capacity in favour of M/s Rajasthan Gum Private Limited from out of the 40.25 MW capacity sanctioned in favour of M/s Suzlon Infrastructure Limited at Sindigiri site of Kuragodu village in land Sy. No. 472 Bellary Taluk, Bellary District as detailed below and subject to the following conditions.

| Village Name | Taluk & District | MW | Land Survey Number | No. of WTG | Extent in Land (Acres) | WTG Number |
|---|---|---|---|---|---|---|
| Kuragodu | Bellary/Bellary | 2.1 | 472 | 1 No. | 2.00 | SND 107 |

1. **M/s Rajasthan Gum Private Limited** shall execute an agreement with Government within 45 (forty five) days from the date of issue of this order.
2. PPA is assigned to GESCOM. GESCOM shall execute the PPA with **M/s Rajasthan Gum Private Limited.**

3. The Company should commission the project by 31-03-2012 and give an undertaking to that effect.
4. The Company should obtain the consent of the private land owners.
5. The Government reserves the right to Cancel/modify this Order.

The other terms and conditions of the Government Order read at (1) above shall IPSO FACTO be applicable.

By Order and in the name of Governor of Karnataka,
**SURESH. B. KRISHNAPPANAVAR**
Under Secretary to Government,
Energy Department.

P.R. No. 2523

## ಇಂಧನ ಸಚಿವಾಲಯ

**ವಿಷಯ :** ನವೀಕರಿಸಬಹುದಾದ ಇಂಧನ ಯೋಜನೆಗಳಿಗೆ (ಪವನ ಮತ್ತು ಕಿರು ಜಲ ವಿದ್ಯುತ್) ಸಂಬಂಧಿಸಿದಂತೆ ಕಂಡು ಬಂದಿರುವ ಕೆಲವು ಸಮಸ್ಯೆಗಳ ಕುರಿತು ಅಧ್ಯಯನ ಮಾಡಿ ಪರಿಷ್ಕೃತ ಕಾರ್ಯವಿಧಾನವನ್ನು ಶಿಫಾರಸ್ಸು ಮಾಡುವ ಸಲುವಾಗಿ ಅಧಿಕಾರಿಗಳ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ :**

ಸರ್ಕಾರವು ರಾಜ್ಯದಲ್ಲಿ ಪವನ/ಕಿರು ಜಲ/ಸೌರ ವಿದ್ಯುತ್/ಜೈವಿಕ ಇಂಧನ/ಸಹ ವಿದ್ಯುತ್/ತ್ಯಾಜ್ಯದಿಂದ ವಿದ್ಯುಚ್ಛಕ್ತಿ ಮುಂತಾದ ನವೀಕರಿಸಬಹುದಾದ ಇಂಧನ ಮೂಲಗಳಿಂದ ವಿದ್ಯುತ್ ಉತ್ಪಾದಿಸಲು ಖಾಸಗಿ ಸಂಸ್ಥೆಗಳಿಗೆ ಅನುಮೋದನೆ ನೀಡುತ್ತಿವೆ.

ಎಸ್ಕಾಂಗಳ ಸಂಗಡ ಪಿಪಿಎ ಮಾಡಿಕೊಳ್ಳುವಂತಹ, ಕಂದಾಯ/ಅರಣ್ಯ/ಖಾಸಗಿ ಜಮೀನುಗಳಲ್ಲಿ ಸ್ಥಾಪಿತವಾಗುವ ಪವನ ಯೋಜನೆಗಳು ಹಾಗೂ ವೀಲಿಂಗ್ ಮತ್ತು ಬ್ಯಾಂಕಿಂಗ್‌ಗಾಗಿ ಪವನ ಯೋಜನೆಗಳಿಗೆ ಸಂಬಂಧಿಸಿದಂತೆ ಅಭಿವೃದ್ಧಿದಾರರು ವಿಸ್ತೃತ ವಿಂಡ್ ಸ್ಟಡೀಸ್ ನಡೆಸಲು ಎರಡು ವರ್ಷಗಳು ಹಿಡಿಯುತ್ತದೆ ಎಂದು ಮತ್ತು ಕಾನೂನಿನ ಅಡಿಯಲ್ಲಿ ಎರಡು ಹಂತದ ಅನುಮೋದನೆ ಒಳಗೊಂಡಿರುವ ಕಾರಣ ಅರಣ್ಯ ಇಲಾಖೆಯಿಂದ ತೀರುವಳಿಯನ್ನು ಪಡೆಯುವುದು ಸುಧೀರ್ಘ ಕಾಲಾವಧಿ ಬೇಕಾಗುವ ಪ್ರಕ್ರಿಯೆಯಾಗಿದೆಯೆಂದೂ ತಿಳಿಸಲಾಗಿದೆ. ಪರಿಹಾರಾತ್ಮಕ ಅರಣ್ಯೀಕರಣಕ್ಕಾಗಿ ಭೂಮಿಯನ್ನು ಹಂಚಿಕೆ ಪಡೆದುಕೊಳ್ಳುವುದು ಸಹ ಬಹಳ ಸಮಯವನ್ನು ಹಿಡಿಯುತ್ತದೆ. ಅಭಿವೃದ್ಧಿದಾರರ ಪ್ರಕಾರ ಕರ್ನಾಟಕ ಭೂ ಸುಧಾರಣಾ ಅಧಿನಿಯಮದ ಸೆಕ್ಷನ್ 109ರ ಪ್ರಕಾರ ಕಂದಾಯ ಭೂಮಿಯನ್ನು ಲೀಸಿಗೆ ಪಡೆಯುವುದಕ್ಕಾಗಲಿ ಅಥವಾ ಖಾಸಗಿ ಜಮೀನುಗಳನ್ನು ಕೊಳ್ಳುವುದಕ್ಕಾಗಲಿ ಸಾಕಷ್ಟು ಸಮಯವಾಗುತ್ತದೆ. ಇವುಗಳು ಶಾಸನಾತ್ಮಕ ವಿಷಯಗಳಾಗಿದ್ದು ಇಂಧನ ಇಲಾಖೆಯು ಸಮನ್ವಯ ಸಭೆಗಳನ್ನು ಏರ್ಪಡಿಸುವಷ್ಟರ ಮಟ್ಟಿಗೆ ಮಾತ್ರ ಸಹಾಯ ಮಾಡಬಲ್ಲದ್ದಾಗಿದೆ. ಆದರೆ, ಈ ಕೆಳಕಂಡ ಕೆಲವೊಂದು ಸಮಸ್ಯೆಗಳಿದ್ದು, ಇವುಗಳು ಯಾವುದೇ ಸರ್ಕಾರಿ ಇಲಾಖೆಯನ್ನು ಒಳಗೊಂಡಿದ್ದರೂ ಕೂಡ ಕಳವಳಕ್ಕೆ ಕಾರಣವಾಗಿದೆ.

1. ಅಭಿವೃದ್ಧಿದಾರರು ನಿಶ್ಚಿತ ಸಾಮರ್ಥ್ಯಕ್ಕೆ, ಉದಾಹರಣೆಗೆ 20 ಮೆಗಾವ್ಯಾಟ್ ಸಾಮರ್ಥ್ಯಕ್ಕಾಗಿ ಅರ್ಜಿಯನ್ನು ಸಲ್ಲಿಸುತ್ತಾರೆ. ಮಂಜೂರಾದ ಸಾಮರ್ಥ್ಯವನ್ನು ಅನುಷ್ಠಾನಗೊಳಿಸದಿದ್ದರೂ ಸಹ ಅವರು ಸಾಮರ್ಥ್ಯ ಹೆಚ್ಚಳಕ್ಕಾಗಿ, ಕೆಲವೊಮ್ಮೆ 10 ಪಟ್ಟಿಗೂ ಮೀರಿದ ಸಾಮರ್ಥ್ಯಕ್ಕೆ ಅರ್ಜಿಯನ್ನು ಸಲ್ಲಿಸುತ್ತಾರೆ.
2. ಇನ್ನು ಕೆಲವು ಪ್ರಕರಣಗಳಲ್ಲಿ ಮಂಜೂರಾದ ಸಾಮರ್ಥ್ಯಕ್ಕೆ ಅವಶ್ಯಕವಿರುವ ಭೂಮಿಗಿಂತ ಹೆಚ್ಚು ಜಮೀನನ್ನು ತಡೆಹಿಡಿದು (ಬ್ಲಾಕ್ ಮಾಡಿ) ವಿಂಡ್ ಸ್ಟಡೀಸ್ ಮಾಡಿದ ನಂತರವೇ ನಿಖರ ಅಳತೆಯು ತಿಳಿದುಬರುತ್ತದೆ ಎಂಬ ನೆಪವನ್ನು ಒಡ್ಡುತ್ತಾರೆ.
3. ಈಗಾಗಲೇ ಮಂಜೂರಾಗಿರುವ ಸಾಮರ್ಥ್ಯವನ್ನು ಕಾರ್ಯಾರಂಭಗೊಳಿಸದೆ ಹೊಸ ಪ್ರದೇಶಗಳಲ್ಲಿ ಹೊಸದಾಗಿ ಸಮರ್ಥ್ಯವನ್ನು ಮಂಜೂರು ಮಾಡಲು ಅರ್ಜಿಯನ್ನು ಸಲ್ಲಿಸಿರುತ್ತಾರೆ.
4. ಸ್ಥಳದಲ್ಲಿ ಯಾವೊಂದು ಕಾಮಗಾರಿಯನ್ನು ಕೈಗೊಳ್ಳದೆ ಮತ್ತು ಕಾರ್ಯಾರಂಭಕ್ಕೆ ಮುಂಚಿತವಾಗಿಯೇ ವರ್ಗಾವಣೆಗಾಗಿ ಕೋರಲಾಗುತ್ತಿದೆ.
5. ಕೆಲವು ವೇಳೆ ಸಾಮರ್ಥ್ಯದ ಹೆಚ್ಚಳದ ಜೊತೆಗೆ ವರ್ಗಾವಣೆಗಾಗಿ ಕೋರಲಾಗುತ್ತದೆ ಅಥವಾ ವರ್ಗಾವಣೆಗೆ ಅನುಮೋದನೆ ದೊರಕಿದ ಕೂಡಲೇ ಸಾಮರ್ಥ್ಯದಲ್ಲಿ ಹೆಚ್ಚಳಕ್ಕಾಗಿ ಕೋರುತ್ತಾರೆ. ಕಾರ್ಯಾರಂಭಗೊಳಿಸುವ ನಿಟ್ಟಿನಲ್ಲಿ ಯಾವುದೇ ಪ್ರಗತಿಯೂ ಇರುವುದಿಲ್ಲ.
6. ಯೋಜನೆಗಳ ಕಾರ್ಯಾರಂಭವನ್ನು (commissioning) ಅನುಚಿತವಾಗಿ ವಿಳಂಬಗೊಳಿಸುವುದು ಮತ್ತು ವರ್ಗಾವಣೆ ಮತ್ತು ಸಾಮರ್ಥ್ಯದ ಹೆಚ್ಚಳದ ಅನುಮೋದನೆ ನಂತರ ಕಾಲಾವಧಿ ವಿಸ್ತರಣೆಗಾಗಿ ಕೋರುವುದು.

ಸ್ವಂತ ಬಳಕೆಗಾಗಿ (ಕ್ಯಾಪ್ಟೀವ್ ಯೂಸ್) ಅಥವಾ ಮೂರನೇ ಪಕ್ಷಕ್ಕೆ (ಥರ್ಡ್ ಪಾರ್ಟಿಗೆ) ವಿದ್ಯುತ್ ಮಾರಾಟ ಮಾಡುವಂತಹ, ಖಾಸಗಿ ಜಮೀನಿನ ಮೇಲಣ ಪವನ ವಿದ್ಯುತ್ ಯೋಜನೆಗಳಿಗೆ ಸಂಬಂಧಿಸಿದಂತೆ ಕ್ರೆಡಿಲ್ ಅರ್ಜಿಗಳನ್ನು ಸ್ವೀಕರಿಸುತ್ತಿವೆ ಮತ್ತು ಸರ್ಕಾರವು ಆದೇಶಗಳನ್ನು ಹೊರಡಿಸುತ್ತಿದೆ. ಇಂತಹ ಸ್ವರೂಪದ ಪ್ರಕರಣಗಳಲ್ಲಿ ಕೂಡ ಅಭಿವೃದ್ಧಿದಾರರು ಸರ್ಕಾರವನ್ನು/ಕ್ರೆಡಿಲ್‌ನ್ನು ಸಾಮರ್ಥ್ಯದಲ್ಲಿನ ಹೆಚ್ಚಳ, ವರ್ಗಾವಣೆಗಳು ಮತ್ತು ಕಾಲಾವಧಿ ವಿಸ್ತರಣೆಗಾಗಿ ಸಂಪರ್ಕಿಸುತ್ತಾರೆ. ಮೂಲ ಹಂಚಿಕೆದಾರರು ಯೋಜನೆಗೆ ಸಂಬಂಧಿಸಿದಂತೆ ಯಾವುದೇ ಕಾಮಗಾರಿಯನ್ನು ಕೈಗೊಳ್ಳುವುದಿಲ್ಲ ಆದರೆ ಅದನ್ನು ಬೇರೊಂದು ಕಂಪನಿಗೆ ವರ್ಗಾವಣೆಯನ್ನು ಮಾತ್ರ ಮಾಡುತ್ತಾರೆ. ಟರ್ಬೈನ್‌ಗಳನ್ನು ಸ್ಥಾಪಿಸಬೇಕಾದ ಭೂಮಿಯು ಖಾಸಗಿ ಒಡೆತನದ ಜಮೀನಾಗಿರುವ ಸಂಧರ್ಭದಲ್ಲಿ ಮತ್ತು ಉತ್ಪಾದಿಸಲಾದ ವಿದ್ಯುತ್ತನ್ನು ಎಸ್ಕಾಂಗಳಿಗೆ ಮಾರಾಟ ಮಾಡದಿರುವ ಪ್ರಕರಣಗಳಲ್ಲಿ ಏನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ. ಏಕೆಂದರೆ ಸರ್ಕಾರವು ಅಂತಹ ಯೋಜನೆಗಳನ್ನು ರದ್ದುಪಡಿಸಿ ಬೇರೊಬ್ಬರಿಗೆ ಅದನ್ನು ಹಂಚಿಕೆ ಮಾಡಬೇಕೆಂದರೆ, ಅಂತಹ ಜಮೀನಿನ ಮಾಲೀಕರು ಕೂಡ ಅದಕ್ಕೆ ಸಮ್ಮತಿಸಿದ ಹೊರತು ಅದನ್ನು ಬೇರೊಬ್ಬರಿಗೆ ಹಂಚಿಕೆ ಮಾಡಲು ಬರುವುದಿಲ್ಲ.

ಕೆ.ಇ.ಆರ್.ಸಿ. ಅನುಮೋದಿತ ಟ್ಯಾರಿಫ್‌ನಲ್ಲಿ ಪಿಪಿಎ ಮೂಲಕ ಎಸ್ಕಾಂಗಳು ವಿದ್ಯುತ್ತನ್ನು ಖರೀದಿ ಮಾಡುವಂತಹ ಕಿರು ಜಲ ವಿದ್ಯುತ್ ಯೋಜನೆಗಳಿಗೆ ಸಂಬಂಧಿಸಿದ ಪ್ರಕರಣದಲ್ಲೂ ಸಹ ಕೆಲವು ಅಭಿವೃದ್ಧಿದಾರರು ಸಾಮರ್ಥ್ಯವನ್ನು ಹಂಚಿಕೆ ಮಾಡಿಸಿಕೊಂಡ ತರುವಾಯ ಯಾವುದೇ ಪ್ರಗತಿಯನ್ನು ತೋರಿಸುವುದಿಲ್ಲ. ತದನಂತರ ಅವರು ಸಾಮರ್ಥ್ಯವನ್ನು ಮತ್ತೊಂದು ಕಂಪನಿಗೆ ವರ್ಗಾವಣೆ ಮಾಡಲು, ಕೆಲವೊಮ್ಮೆ ಹಂಚಿಕೆಯಾದ ದಿನಾಂಕದಿಂದ 3 ಅಥವಾ 4 ವರ್ಷಗಳ ನಂತರ, ಅರ್ಜಿಯನ್ನು ಸಲ್ಲಿಸುತ್ತಾರೆ. ಇನ್ನು ಕೆಲವು ಪ್ರಕರಣಗಳಲ್ಲಿ ವರ್ಗಾವಣೆ ಕೋರಿಕೆಯ ಜೊತೆಗೇ ಸಾಮರ್ಥ್ಯದಲ್ಲಿ ಹೆಚ್ಚಳಕ್ಕಾಗಿ ಕೋರಿಕೆಯನ್ನು ಸಲ್ಲಿಸುತ್ತಾರೆ. ಯೋಜನೆಯನ್ನು ಜಾರಿಗೆ ತರಲು ಕಾಲಾವಧಿ ವಿಸ್ತರಣೆಗಾಗಿ ವರ್ಗಾವಣೆ ಪಡೆದುಕೊಂಡವರು

ವರ್ಗಾವಣೆ ನಂತರ ಕೋರಿರುವ ಹಲವಾರು ನಿದರ್ಶನಗಳಿವೆ. ಕೆಲವು ಕಂಪನಿಗಳು ಪಕ್ಕಪಕ್ಕದಲ್ಲೇ ಇರುವಂತಹ ಎರಡು ಯೋಜನೆಗಳಿಗೆ ಸಂಬಂಧಿಸಿದಂತೆ ತಲಾ 24.5 ಮೆ.ವ್ಯಾ. ಸಾಮರ್ಥ್ಯ ಹಂಚಿಕೆ/ಸಾಮರ್ಥ್ಯ ಹೆಚ್ಚಳಕ್ಕಾಗಿ ತಮ್ಮದೇ ಹೆಸರಿನಲ್ಲಿ ಅಥವಾ ಬೇರೆಬೇರೆ ಹೆಸರುಗಳಲ್ಲಿ ಕೇಳುತ್ತಿರುವ ನಿದರ್ಶನಗಳೂ ಇರುತ್ತವೆ. 25 ಮೆ.ವ್ಯಾ. ಸಾಮರ್ಥ್ಯದವರೆಗಿನ ಯೋಜನೆಗಳನ್ನು ಕಿರು ಜಲ ವಿದ್ಯುತ್ ಯೋಜನೆಗಳೆಂದು ಪರಿಗಣಿಸಲಾಗುತ್ತಿದ್ದು, ಕಿರು ಜಲ ವಿದ್ಯುತ್ ಯೋಜನೆಗಳ ಪರಿಭಾಷೆಯ ಮಿತಿಯೊಳಗೆ ಇರುವಂತೆ ಮಾಡಲು ಹೀಗೆ ಮಾಡಲಾಗುತ್ತದೆ.

ಸ್ವಂತ ಬಳಕೆ ಅಥವಾ ಮೂರನೇ ಪಕ್ಷಕ್ಕೆ (third party)ಗೆ ವಿದ್ಯುತ್ ಮಾರಾಟ ಮಾಡಲಿರುವ ಕಿರು ಜಲ ವಿದ್ಯುತ್ ಯೋಜನೆಗಳು ನದಿಗಳು, ಹೊಳೆಗಳು ಮತ್ತು ಜಲಮಾರ್ಗಗಳು ಸರ್ಕಾರಕ್ಕೆ ಸೇರಿರುವುದರಿಂದ ಉತ್ಪಾದಿಸುವ ವಿದ್ಯುತ್ ಸ್ವಂತ ಬಳಕೆಗಾಗಲೀ ಅಥವಾ ಮೂರನೇ ಪಕ್ಷಕ್ಕೆ ಮಾರಾಟ ಮಾಡಲಾಗಲೀ ಇದ್ದರೂ ಕೂಡ ಮೇಲ್ಕಾಣಿಸಿದ ಸಮಸ್ಯೆಗಳು ಇಲ್ಲಿಯೂ ಕೂಡ ಅನ್ವಯಿಸುತ್ತಿದ್ದು, ಅದಕ್ಕಿಂತ ಸ್ವಲ್ಪ ಕಡಿಮೆ ಮಟ್ಟದಲ್ಲಿ ಅನ್ವಯಿಸುತ್ತವೆ.

ಪವನ ಮತ್ತು ಕಿರು ಜಲ ವಿದ್ಯುತ್ ಯೋಜನೆಗಳ ಸಾಮರ್ಥ್ಯ ಅನುಮೋದನೆಯನ್ನು ಹೆಚ್ಚು ವಸ್ತುನಿಷ್ಠವನ್ನಾಗಿಸುವುದರ ಜೊತೆಗೆ ಸಾಮರ್ಥ್ಯದಲ್ಲಿ ಅಗಾಧ ಹೆಚ್ಚಳ ಮತ್ತು ಅನುಚಿತ ಕಾಲಾವಧಿ ವಿಸ್ತರಣೆಗಳನ್ನು (ಅದಕ್ಕೆ ತಾಂತ್ರಿಕ ಸುಧಾರಣೆಗಳು ಕಾರಣವಿರುವುದನ್ನು ಹೊರತುಪಡಿಸಿ) ತಪ್ಪಿಸುವ ದೃಷ್ಟಿಯಿಂದ ಸೂಕ್ತ ವಿಧಾನವೊಂದನ್ನು (methodology ಯನ್ನು) ರೂಪಿಸುವುದು ಮತ್ತು ಈ ಬಗ್ಗೆ ಒಂದು ನೀತಿಯನ್ನು (ಪಾಲಿಸಿ) ಹೊಂದುವುದು ಅವಶ್ಯಕವಿರುತ್ತದೆ. ಆದ್ದರಿಂದ, ಈ ಕುರಿತು ಎಲ್ಲಾ ಅಂಶಗಳನ್ನು ಕೂಲಂಕಶವಾಗಿ ಪರಿಶೀಲಿಸಿ ಸರ್ಕಾರವು ಒಂದು ವಿವರವಾದ ವರದಿಯನ್ನು ನೀಡುವ ಸಲುವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚಿಸಲು ಉದ್ದೇಶಿಸಿದೆ, ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 371 ಎನ್‌ಸಿಇ 2011, ಬೆಂಗಳೂರು, ದಿನಾಂಕ : 26–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತಾಂಶಗಳ ಹಿನ್ನೆಲೆಯಲ್ಲಿ ನವೀಕರಿಸಬಹುದಾದ ಇಂಧನ ಯೋಜನೆಗಳಿಗೆ (ಪವನ/ಕಿರುಜಲ ವಿದ್ಯುತ್/ಸೌರ/ಜೈವಿಕ ಮುಂತಾದ) ಸಂಬಂಧಿಸಿದಂತೆ ಕಂಡು ಬಂದಿರುವ ಸಮಸ್ಯೆಗಳನ್ನು ಅಧ್ಯಯನಮಾಡಿ ಪರಿಷ್ಕೃತ ಕಾರ್ಯವಿಧಾನವನ್ನು ಶಿಫಾರಸ್ಸುಮಾಡುವ ಸಲುವಾಗಿ ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ವ್ಯವಸ್ಥಾಪಕ ನಿರ್ದೇಶಕರು, ಕವಿಪ್ರನಿನಿ | ಅಧ್ಯಕ್ಷರು |
| 2 | ವ್ಯವಸ್ಥಾಪಕ ನಿರ್ದೇಶಕರು, ಕವಿನಿನಿ | ಸದಸ್ಯರು |
| 3 | ವ್ಯವಸ್ಥಾಪಕ ನಿರ್ದೇಶಕರು, ಬೆಸ್ಕಾಂ | ಸದಸ್ಯರು |
| 4 | ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ | ಸದಸ್ಯರು |
| 5 | ಉಪ ಕಾರ್ಯದರ್ಶಿ, ಇಂಧನ ಇಲಾಖೆ | ಸಂಚಾಲಕರು |

ಸಮಿತಿಯು ಪವನ ಮತ್ತು ಕಿರು ಜಲ ವಿದ್ಯುತ್ ಹಾಗೂ ಇತರೆ ಯೋಜನೆಗಳ ಸಾಮರ್ಥ್ಯ ಅನುಮೋದನೆಯನ್ನು ಹೆಚ್ಚು ವಸ್ತುನಿಷ್ಠವನ್ನಾಗಿಸುವುದರ ಜೊತೆಗೆ ಸಾಮರ್ಥ್ಯದಲ್ಲಿ ಅಗಾಧ ಹೆಚ್ಚಳ ಮತ್ತು ಅನುಚಿತ ಕಾಲಾವಧಿ ವಿಸ್ತರಣೆಗಳನ್ನು ತಪ್ಪಿಸುವ ದೃಷ್ಟಿಯಿಂದ ಇದನ್ನು ಟೆಂಡರ್ ಪ್ರಕ್ರಿಯೆ ಮೂಲಕ ಮಾಡತಕ್ಕದ್ದೇ ಅಥವಾ ಈಗಿರುವ ವ್ಯವಸ್ಥೆಯಲ್ಲಿ ಸುಧಾರಣೆ ತರುವ ಮೂಲಕ ಮಾಡತಕ್ಕದ್ದೇ ಎಂಬುದನ್ನು ಹಾಗೂ ಖಾಸಗಿ ಜಮೀನಿನಲ್ಲಿ ಸ್ಥಾಪಿಸಲಾಗುವಂತಹ, ಮೂರನೇ ಪಕ್ಷಕ್ಕೆ ವಿದ್ಯುತ್ ಮಾರಾಟ ಮಾಡಲಿರುವ ಅಥವಾ ಸ್ವಂತ ಬಳಕೆಗೆ ಉಪಯೋಗಿಸುವ, ಯೋಜನೆಗಳಿಗೆ ಸಂಬಂಧಿಸಿದ ಹಾಗೆ ಭಿನ್ನ ಮಾರ್ಗವನ್ನು ಅನುಸರಿಸಬೇಕಾಗುತ್ತಿರುವುದರಿಂದ ಯೋಜನೆ ಕಾರ್ಯಾರಂಭಗೊಳ್ಳುವವರೆಗೆ ವರ್ಗಾವಣೆಗಳನ್ನು ಪ್ರತಿಬಂಧಿಸತಕ್ಕದ್ದೇ ಎಂಬುದನ್ನು ಪರಿಶೀಲಿಸುವುದು.

ಸದರಿ ಸಮಿತಿಯು ಆರು ವಾರದೊಳಗಾಗಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 2524

## WATER RESOURCES SECRETARIAT

**Sub :-** Government of India Scheme for Providing Central Assistance to The State Governments for Flood Control and River Management Schemes Under Flood Management programme- A State Sector Scheme (2007-12)- Regarding according Administrative Approval to the DPRs regarding

**Read:-** Letter No. 78/112007-Mon (s)/1812-13, CWC, Monitoring south Organization, Bangalore, Government of India, dated: 11.08.2011.

**PREAMBLE:**

Government of India has issued Administrative Approval vide Order F No 5/7/2006-Ganga(Vol-II/4749-77 dated: 28.11.2007, Ministry of water Resources, Ganga Wing, Government of India. The scheme is "Flood management programme' under State sector for under taking Flood control and River Management works in the entire country during the XI paln.

The High lights of this scheme as per the Government of India approval and guidelines are as follows.

a) The Scheme is approved in principle by Government of India However; detailed proposal (s) for each work would be prepared and submitted by the implementing agency.

b) The critical flood management and erosion control works including drainage development and sea erosion works would be considered for central assistance under the Scheme depending upon the critical situation.

ರೂ. 1600.00 ಲಕ್ಷಗಳ ಅಂದಾಜು ಮೊತ್ತದ ಈ ಕಾಮಗಾರಿಯ ಅಂದಾಜಿಗೆ ಲೆಕ್ಕ ಶೀರ್ಷಿಕೆ "4702–00–101–1–10–139 ಎ.ಐ.ಬಿ.ಪಿ ಕಾಮಗಾರಿಗಳು" ರಡಿಯಲ್ಲಿ ಈ ಹಿಂದೆ ನೀಡಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 96 ಮಸಾವಿ 2011 (1) (ತಾಂತ್ರಿಕ) ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್ 2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಚಿತ್ತಾಪುರ ತಾಲ್ಲೂಕು ಗೋಳಾ(ಕೆ) ಹಾಗೂ ಇಂಗಳಗಿ ಗ್ರಾಮಗಳ ನಡುವೆ ಕಾಗಿನಾ ನದಿಗೆ ಅಡ್ಡಲಾಗಿ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 1600.00 ಲಕ್ಷ ಮೊತ್ತದ ಅಂದಾಜಿಗೆ (ರೂ. ಒಂದು ಸಾವಿರದ ಆರು ನೂರು ಲಕ್ಷಗಳು ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಸರ್ಕಾರವು ಈ ಹಿಂದೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆಯನ್ನು ಸ್ಥಿರಗೊಳಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಲೋಇ–622–ಅಕೋ–1/11 ದಿನಾಂಕ: 20–08–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. ನಂ. 2542

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ತಿಪಟೂರು ಊರಮುಂದಿನ ಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯ ಅಂದಾಜಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೈಗೊಂಡ ಯೋಜನೆಯಡಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010 ದಿನಾಂಕ: 17–05–2010.
2. ದಿನಾಂಕ: 22–08–2011 ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹದಿಮೂರನೇ ಹಣಕಾಸು ಆಯೋಗದಡಿ ರೂ. 350.00 ಕೋಟಿ ಅಂದಾಜು ವೆಚ್ಚದ 631 ಕಾಮಗಾರಿಗಳ ಅನುಷ್ಠಾನಕ್ಕೆ ಅನುಮೋದನೆ ನೀಡಲಾಗಿದೆ. ಇದರಲ್ಲಿ ರೂ. 3.50 ಕೋಟಿ ಅಂದಾಜು ಮೊತ್ತದ ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ತಿಪಟೂರು ಊರಮುಂದಿನ ಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯು ಸೇರಿರುತ್ತದೆ. ಈ ಕಾಮಗಾರಿಯ ಅಂದಾಜು ಪಟ್ಟಿಗೆ ದಿನಾಂಕ: 09–05–2011 ರಲ್ಲಿ ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯಲ್ಲಿ ತೀರುವಳಿ ದೊರಕಿದ್ದು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ರವರು ಸರ್ಕಾರದ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಕಾಮಗಾರಿಯ ಅಂದಾಜು ಪಟ್ಟಿಯನ್ನು 2011–12ನೇ ಸಾಲಿಗೆ ಮುಂದುವರೆಸಿರುವ 2010–11ನೇ ಸಾಲಿನ ದರಪಟ್ಟಿಯ ದರಗಳನ್ನಳವಡಿಸಿ ತಯಾರಿಸಲಾಗಿದ್ದು ಇದರಲ್ಲಿ ಕೆರೆಯ ಅಂಗಳದಲ್ಲಿ ಹೂಳೆತ್ತುವುದು, ಕೆರೆಯ ಏರಿ ಹಾಗೂ ಕೋಡಿ ದುರಸ್ತಿ ಮತ್ತಿತರೆ ಕೆರೆಯ ಹಾಗೂ ಸುತ್ತಮುತ್ತಲಿನ ಸೌಂದರೀಕರಣ ಕಾಮಗಾರಿಗಳನ್ನು ಕೈಗೊಳ್ಳಲು ಅವಕಾಶ ಮಾಡಿದೆ. ಈ ಕೆರೆಯ ಏರಿಯ ಉದ್ದ 1165.00 ಮೀ ಹಾಗೂ ಗರಿಷ್ಠ ಎತ್ತರ 7.00 ಮೀ ಆಗಿದ್ದು ಮೇಲ್ಭಾಗದಲ್ಲಿ 4.00 ಮೀ ಅಗಲ ಇರುತ್ತದೆ. ಕೆರೆಯ ನೀರು ಶೇಖರಣಾ ಸಾಮರ್ಥ್ಯವು 35.50 ದಶಲಕ್ಷ ಘನ ಅಡಿಗಳಾಗಿರುತ್ತದೆ.

ಲೆಕ್ಕಶೀರ್ಷಿಕೆ "4702–00–101–1–12–059 ಹದಿಮೂರನೇ ಹಣಕಾಸು ಆಯೋಗದ ಅನುದಾನ" ದಡಿ ರೂ. 350.00 ಲಕ್ಷಗಳ ಅಂದಾಜುಮೊತ್ತದ ಈ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011 (ತಾಂತ್ರಿಕ) ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ತಿಪಟೂರು ಊರ ಮುಂದಿನ ಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯ ರೂ. 350.00 ಲಕ್ಷ (ರೂ. ಮುನ್ನೂರ ಐವತ್ತು ಲಕ್ಷ ಮಾತ್ರ) ಮೊತ್ತದ ಅಂದಾಜು ಪಟ್ಟಿಗೆ ಹದಿಮೂರನೇ ಹಣಕಾಸು ಆಯೋಗದ ಅನುದಾನದಡಿ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1) ಕಾಮಗಾರಿಯ ಅನುಷ್ಠಾನ ಪೂರ್ವ ಹಾಗೂ ಅನುಷ್ಠಾನ ನಂತರದ ಫಲಶೃತಿಗಳನ್ನು ದಾಖಲಿಸುವುದು.
2) ಕಾಮಗಾರಿಗಳ ವಿವಿಧ ಅನುಷ್ಠಾನ ಹಂತದ ವೀಡಿಯೋ ಹಾಗೂ ಛಾಯಾಚಿತ್ರಗಳನ್ನು ದಾಖಲಿಸುವುದು.
3) ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
4) ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
5) ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
6) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

7) ಕಾಮಗಾರಿ ಪೂರ್ಣಗೊಂಡ ಕೂಡಲೇ ಪೂರ್ಣತಾ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

8) ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9) ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10) ಈ ಯೋಜನೆಗಳಿಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16-05-2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2543 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು, ಗೆದ್ಲೆಹಳ್ಳಿ ಹತ್ತಿರ ಕಲ್ಲುಹೊಳೆ ಹಳ್ಳಕ್ಕೆ ಅಡ್ಡಲಾಗಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(2), ದಿನಾಂಕ: 16-09-2010.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸ(ದ)/ತಾಂ.2/ಸ.ಇ6/ಚಿಕ್ಕಮಗಳೂರು/ಕಡೂರು/ಗೆದ್ಲೆಹಳ್ಳಿ/ಇ-ಟೆಂಡರ್/1976/2011/3273, ದಿನಾಂಕ: 03-10-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಗೆದ್ಲೆಹಳ್ಳಿ ಹತ್ತಿರ ಕಲ್ಲುಹೊಳೆ ಹಳ್ಳಕ್ಕೆ ಅಡ್ಡಲಾಗಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ರೂ. 137.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮೊದಲ ಬಾರಿಗೆ ಕರೆದ ಟೆಂಡರ್ ಪ್ರಕಟಣೆಗೆ ಸ್ವೀಕೃತವಾಗಿದ್ದ ಮೂರು ಟೆಂಡರುಗಳು ಅನರ್ಹವಾಗಿರುತ್ತವೆ. ಎರಡನೆ ಬಾರಿಗೆ ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಕರೆಯಲಾದ ಅಲ್ಪಾವಧೀ ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 24-08-2011 |
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 29-08-2011 |
| ಉದಯವಾಣಿ ಮತ್ತು ಪ್ರಜಾವಾಣಿ ದಿನಪತ್ರಿಕೆ | 27-08-2011 |
| ದಿ ಹಿಂದೂ | 26-08-2011 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ | 27-08-2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ನಾಲ್ವರು ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 24-09-2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರ್‌ಗೆ ಇಡಲಾದ ಮೊತ್ತ | | | | ರೂ. 1,35,65,070/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,81,21,910/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರು | 1.97,30,942/- | 45.454 ಹೆಚ್ಚು | 8.8789 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 8.8789 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರ್‌ನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 8.50% ಹೆಚ್ಚಿನ ದರಗಳಿಗೆ ಅಂದರೆ ರೂ. 1,96,62,272/-ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 71 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಗೆದ್ಲೆಹಳ್ಳಿ ಹತ್ತಿರ ಕಲ್ಲುಹೊಳೆ ಹಳ್ಳಕ್ಕೆ ಅಡ್ಡಲಾಗಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ

ರೂ. 1,81,21,910/–ಗಳ ಮೇಲೆ ಶೇ. 8.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,96,62,272/–ಗಳಿಗೆ (ರೂ. ಒಂದು ಕೋಟಿ ತೊಂಬತ್ತಾರು ಲಕ್ಷ ಅರವತ್ತೆರಡು ಸಾವಿರದ ಇನ್ನೂರ ಎಪ್ಪತ್ತೆರಡು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಬಿ.ಕೆ. ಗಂಗಾಧರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶದಲ್ಲಿ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರುಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. ನಂ. 2544

## COMMERCE AND INDUSTRIES SECRETARIAT

**Subject:** Releasing Rs. 25,00,000/- (Rupees Twenty five lakhs) in favour of the Central Bureau of Investigation Anti-Corruption Branch, Bangalore to meet the investigation expenditure.

Read: Letter No. RC 18 & 19/A/2011/CBI/ACB/BLR/775 dated: 07-10-2011 of Deputy Inspector General of Police, CBI:ACB, Bangalore.

**Preamble:**

Deputy Inspector General of Police, CBI:ACB, Bangalore, in his letter dated: 07-10-2011 read above has stated that pursuant to the order passed by the Hon'ble Supreme Court of India in SLP (Civil) No. 7366-7367/2010 on 23-09-2011, the CBI has registered two criminal cases vide RC 18(A)/2011and RC 19(A)/2011 and has started investigation. This investigation involves examination of large number of witnesses, travel, expenditure for stationeries and expert opinions etc. Further it has been stated that the cases being technical in nature a lot of scientific data needs to be collected from the foreign countries and analysis has to be done by the experts, which involves huge expenditure. Hence, he has requested to sanction Rs. 25,00,000/- to meet the investigation expenditure for smooth and early completion of the investigation. He also requested to nominate a Nodal officer from Department of Mines and Geology, Forest, Revenue and Police for better co-ordination for the purpose of collecting documents.

After examining the proposal the Government has felt it necessary to issue Government Order in this regard. Hence, the following order:-

**Government Order No. CI 254: MMM 2011, Bangalore Dated: 15-10-2011**

A sum of Rs. 25,00,000/- (Twenty Five lakhs Rupees only) is sanctioned in favour of the Central Bureau of Investigation Anti-Corruption Branch, Bangalore to meet investigation expenditure for smooth and early completion of the investigation. This amount may be met out under the head of Account 2853-02-001-0-01(125) Modernization.

Further the following officers has been nominated as Nodal officers for the purpose of co-ordination to collect the documents etc.:-

| Sl. No. | Name | Designation |
|---|---|---|
| 1. | Shri H.R. Srinivas, IAS., | Director of Department of Mines and Geology |
| 2. | Shri R.K. Datta, IPS., | Additional Director General of Police (Law and Order) |
| 3. | Shri Deepak Sharma, IFS., | Additional Chief Conservator of Forests, (Vigilence) |
| 4. | Shri Amlan Adithya Biswas, IAS., | Deputy Commissioner, Bellary District. |

This order is issued as per the financial powers delegated to the Secretaries to the Government vide Order No. FD 1: TEP 2008 dated: 16-05-2008.

By Order and in the name of the Governor of Karnataka

**M.V. Shivasubramani**

Under Secretary to Government (Mines)

Commerce & Industries Department.

PR No. 2545

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸರ್ಕಾರದಿಂದ ಈಗಾಗಲೇ ಅನುಮೋದನೆಯಾಗಿರುವ ಸಾತನೂರು, ನಂದಗುಡಿ, ರಾಮನಗರಂ ಮತ್ತು ಸೋಲೂರು ಸಮಗ್ರ ಉಪನಗರಗಳ ವ್ಯಾಪ್ತಿಯಲ್ಲಿ ಅಭಿವೃದ್ಧಿ/ಭೂ ಉಪಯೋಗ ಬದಲಾವಣೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ನಅಇ 97 ಬಿಎಂಆರ್ 2006 ದಿನಾಂಕ: 18-10-2006.
2. ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧಿಸೂಚನೆ ಸಂಖ್ಯೆ: ಬಿ.ಎಂ.ಆರ್.ಡಿಎ/ ಸ್ಯಾಟ್ ಟೌನ್/ಐಟಿ/ಬಿಟಿ/2005-06 ದಿನಾಂಕ: 29-11-2006.
3. ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರ ಪತ್ರದ ಸಂಖ್ಯೆ: ಬಿ.ಎಂ.ಆರ್.ಡಿ.ಎ/ಬಿಡದಿ ಮತ್ತು ಸೋಲೂರು ಟೌನ್‌ಶಿಪ್/4/2009-10, ದಿನಾಂಕ: 11-07-2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 18-10-2006ರ ಆದೇಶದಲ್ಲಿ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಬಿಡದಿ, ರಾಮನಗರ, ಸಾತನೂರು, ಸೋಲೂರು ಮತ್ತು ನಂದಗುಡಿ ಸೇರಿದಂತೆ ಐದು ಸಮಗ್ರ ಉಪನಗರಗಳನ್ನು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ಅಭಿವೃದ್ಧಿಪಡಿಸಲು ಪ್ರಸ್ತಾವನೆಯನ್ನು ಅನುಮೋದಿಸಿ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾರ್ಯಕಾರಿ ಸಮಿತಿಯ ಶಿಫಾರಸ್ಸಿನ ಮೇರೆಗೆ, ಪ್ರಾಯೋಗಿಕವಾಗಿ, ಬಿಡದಿ ಸಮಗ್ರ ಉಪನಗರ ಯೋಜನೆಯನ್ನು ಮೊದಲನೆಯ ಟೌನ್‌ಶಿಪ್ ಯೋಜನೆಗಾಗಿ ಅಭಿವೃದ್ಧಿಪಡಿಸಲು ಅನುಮತಿ ನೀಡಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 29-11-2006ರ ಅಧಿಸೂಚನೆಯಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಬಿಡದಿ ಸಮಗ್ರ ಟೌನ್‌ಶಿಪ್ ಪ್ರದೇಶದಲ್ಲಿ ಬರುವ 10 ಹಳ್ಳಿಗಳ ಅಭಿವೃದ್ಧಿ ಕಾರ್ಯಗಳನ್ನು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧಿನಿಯಮ 1985ರ ಸೆಕ್ಷನ್ 9 ಮತ್ತು 10ರಡಿಯಲ್ಲಿ ಸ್ಥಗಿತಗೊಳಿಸಿ ಆದೇಶ ಹೊರಡಿಸಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ: 11-07-2011ರ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ರಾಮನಗರ, ಸಾತನೂರು, ಸೋಲೂರು ಮತ್ತು ನಂದಗುಡಿ ಟೌನ್‌ಶಿಪ್ ಪ್ರದೇಶದಲ್ಲಿ ಸಮಗ್ರ ಉಪನಗರ ಯೋಜನೆಯು ಕಲ್ಪನಾ ಹಂತದಲ್ಲಿದ್ದು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1985ರ ಕಲಂ 9 ಮತ್ತು 10ರಡಿಯಲ್ಲಿ ಅಭಿವೃದ್ಧಿಕಾರ್ಯಗಳನ್ನು ಸ್ಥಗಿತಗೊಳಿಸಿರುವುದಿಲ್ಲವೆಂದು ಹಾಗೂ ಈ ಟೌನ್‌ಶಿಪ್ ಅಭಿವೃದ್ಧಿಗಾಗಿ ತಾತ್ವಿಕ ಅನುಮೋದನೆ ನೀಡಿರುವುದರಿಂದ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ಉಲ್ಲೇಖಿತ 2ರ ಅಧಿಸೂಚನೆಯನ್ನು ನಮೂದಿಸಿ ಪ್ರಸ್ತಾವನೆಗಳನ್ನು ತಿರಸ್ಕರಿಸುತ್ತಿರುವುದಾಗಿ ವರದಿ ಮಾಡಿರುತ್ತಾರೆ. ಮುಂದುವರೆದು, ಈ ಸಮಗ್ರ ಉಪನಗರಗಳ ಯೋಜನೆಯು ಬೆಂಗಳೂರು ನಗರಕ್ಕೆ ಒತ್ತಡ ಕಡಿಮೆ ಮಾಡುವ ದೃಷ್ಟಿಯಿದ್ದರೂ ಉದ್ದಿಮೆದಾರರು ಬೆಂಗಳೂರು ನಗರ ಸುತ್ತಮುತ್ತ ಹೆಚ್ಚಿನ ಆದ್ಯತೆ ನೀಡುತ್ತಿರುವುದರಿಂದ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯ ಪ್ರದೇಶದಲ್ಲಿ ವಾಣಿಜ್ಯ, ಕೈಗಾರಿಕೆ, ವಸತಿ ಹಾಗೂ ಮತ್ತಿತರ ಅಭಿವೃದ್ಧಿಗಳನ್ನು ಪ್ರಾಧಿಕಾರವು ತಿರಸ್ಕರಿಸುತ್ತಿರುವುದರಿಂದ ಆಪೇಕ್ಷಿತ ಆರ್ಥಿಕ ಅಭಿವೃದ್ಧಿ ಮೇಲೆ ಋಣಾತ್ಮಕ ಪರಿಣಾಮ ಬೀರುವುದನ್ನು ಕೇಂದ್ರೀಕರಿಸಿ ಆರ್ಥಿಕ ಅಭಿವೃದ್ಧಿಯನ್ನು ಮುನ್ನಡೆಸುವ ದಿಸೆಯಲ್ಲಿ ಈ ಉಪನಗರಗಳ ಪ್ರದೇಶಗಳಲ್ಲಿ ವಾಣಿಜ್ಯ, ಕೈಗಾರಿಕೆ, ವಸತಿ ಉದ್ದೇಶ ಹಾಗೂ ಮತ್ತಿತರ ಚಟುವಟಿಕೆಗಳಿಗೆ ಅನುಮತಿ ನೀಡಲು ಸಾರ್ವಜನಿಕರಿಂದ ಬರುವ ಮನವಿಗಳನ್ನು ಪರಿಗಣಿಸಿ, ಪ್ರಕರಣವಾರು ಭೂ ಉಪಯೋಗ/ಅಭಿವೃದ್ಧಿಗೆ ಯಾವುದು ಅನ್ವಯವಾಗುವುದೋ ಅದರಂತೆ ಬದಲಾವಣೆಗೆ ಅನುಮತಿ ನೀಡುವುದು ಸೂಕ್ತವಾಗಿದೆಯೆಂದು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ತಿಳಿಸಿರುತ್ತಾರೆ. ಕಾರಣ, ಈ ಆದೇಶ:-

**ಸರ್ಕಾರದ ಆದೇಶ ಸಂಖ್ಯೆ: ನಅಇ 64 ಬಿಎಂಆರ್ 2010 ಬೆಂಗಳೂರು, ದಿನಾಂಕ: 29-09-2011**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಪರಿಗಣಿಸಿ, ರಾಮನಗರ, ಸಾತನೂರು, ಸೋಲೂರು, ನಂದಗುಡಿ ಸಮಗ್ರ ಉಪನಗರಗಳ ಪ್ರದೇಶಗಳ ವ್ಯಾಪ್ತಿಯಲ್ಲಿ ಬರುವ ಜಮೀನುಗಳಿಗೆ ಅಭಿವೃದ್ಧಿ ಕಾರ್ಯಗಳನ್ನು ಪ್ರಾಧಿಕಾರದ ಕಾಯ್ದೆ 1985ರ ಕಲಂ 9 ಮತ್ತು 10ರಡಿಯಲ್ಲಿ ಸ್ಥಗಿತಗೊಳಿಸದಿರುವುದರಿಂದ ಹಾಗೂ ಈ ಮೇಲಿನ ಸಮಗ್ರ ಉಪನಗರಗಳ ಅಭಿವೃದ್ಧಿಯಿಂದ ಬೆಂಗಳೂರು ನಗರಕ್ಕೆ ಒತ್ತಡ ಕಡಿಮೆ ಮಾಡುವ ದೃಷ್ಟಿಯಿದ್ದು ಉದ್ದಿಮೆದಾರರು ಬೆಂಗಳೂರು ನಗರದ ಸುತ್ತಮುತ್ತ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡುತ್ತಿರುವುದರಿಂದ, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯ ಪ್ರದೇಶದಲ್ಲಿ ವಾಣಿಜ್ಯ, ಕೈಗಾರಿಕೆ, ವಸತಿ ಹಾಗೂ ಮತ್ತಿತರ ಅಭಿವೃದ್ಧಿಗಾಗಿ ಬರುವ ಪ್ರಸ್ತಾವನೆಗಳನ್ನು ಪ್ರಾಧಿಕಾರವು ತಿರಸ್ಕರಿಸುತ್ತಿರುವುದರಿಂದ, ಅಪೇಕ್ಷಿತ ಆರ್ಥಿಕ ಅಭಿವೃದ್ಧಿ ಮೇಲೆ ಋಣಾತ್ಮಕ ಪರಿಣಾಮ ಬೀರುವುದನ್ನು ಸರ್ಕಾರವು ಗಮನಿಸಿ, ಈಗಾಗಲೇ ಅನುಮೋದನೆಯಾಗಿರುವ ಸಾತನೂರು, ಸೋಲೂರು, ನಂದಗುಡಿ ಮತ್ತು ರಾಮನಗರಂ ಸಮಗ್ರ ಉಪನಗರಗಳ ವ್ಯಾಪ್ತಿಯಲ್ಲಿನ ಪ್ರದೇಶಗಳ ಜಮೀನುಗಳಿಗೆ ವಾಣಿಜ್ಯ, ಕೈಗಾರಿಕೆ, ವಸತಿ ಹಾಗೂ ಮತ್ತಿತರ ಅಭಿವೃದ್ಧಿಗಾಗಿ ಭೂ ಉಪಯೋಗ ಬದಲಾವಣೆಗೆ ಅಥವಾ ಅಭಿವೃದ್ಧಿಗೆ ಬರುವ ಪ್ರಸ್ತಾವನೆಗಳನ್ನು ಪ್ರಕರಣವಾರು ಪರಿಶೀಲಿಸಿ ಸರ್ಕಾರದ ಪೂರ್ವಾನುಮತಿಯೊಂದಿಗೆ ಮಂಜೂರಾತಿ ನೀಡಿ ಕ್ರಮಕೈಗೊಳ್ಳಲು ಆದೇಶಿಸಿದೆ. ಈ ಅಭಿವೃದ್ಧಿಗಳನ್ನು ಸಂಬಂಧಿಸಿದ ಸಮಗ್ರ ಉಪನಗರ ಯೋಜನೆಯಲ್ಲಿ ಸೂಕ್ತವಾಗಿ ಅಳವಡಿಸಿಕೊಳ್ಳುವುದು.

ಈ ಆದೇಶವನ್ನು ಸಚಿವ ಸಂಪುಟ ಪ್ರಕರಣ ಸಂಖ್ಯೆ: ಸಿ/415/2011 ದಿನಾಂಕ: 13-09-2011ರ ಅನುಮೋದನೆಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. ನಂ. 2546

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ. ಕುಮಾರಸ್ವಾಮಿ, ಡಿವೈ.ಎಸ್.ಪಿ. ರವರ ಹಿಂದಿನ ಸೇವಾ ಅವಧಿಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ಪೊಲೀಸ್ ಮಹಾ ನಿರ್ದೇಶಕರು ರವರ ಪತ್ರ ಸಂಖ್ಯೆ : ಸಿಬಿ-4/70/2010-11, ದಿನಾಂಕ : 24-12-2010 ಮತ್ತು 12-7-2011.

**ಪ್ರಸ್ತಾವನೆ :**

ಶ್ರೀ ಎ. ಕುಮಾರಸ್ವಾಮಿ, ಡಿವೈ.ಎಸ್.ಪಿ. ಬೆಂಗಳೂರು ಗ್ರಾಮಾಂತರ ಉಪ ವಿಭಾಗ, ಬೆಂಗಳೂರು ಜಿಲ್ಲೆ ರವರು ಈ ಹಿಂದೆ ಇಲಾಖೆಯಲ್ಲಿ ಪಿಎಸ್ಐ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ್ದು ನಂತರ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಡಿವೈ.ಎಸ್.ಪಿ ಹುದ್ದೆಗೆ ಕರ್ನಾಟಕ ಲೋಕಸೇವಾ ಆಯೋಗದ ಮುಖೇನ ಆಯ್ಕೆಯಾಗಿ ದಿನಾಂಕ : 2-6-2008 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224ಎ ರಲ್ಲಿ ಸರ್ಕಾರದ ಸೇವೆಯಲ್ಲಿ ಸಲ್ಲಿಸಿದ ಎಲ್ಲಾ ತಾತ್ಕಾಲಿಕ/ಖಾಯಂ ಸೇವೆಯನ್ನು ನಿವೃತ್ತಿ ವೇತನಕ್ಕೆ ಪರಿಗಣಿಸಲು ಸೂಚಿಸಲಾಗಿದ್ದು, ನಿಯಮ 224 ರಲ್ಲಿ ನಿವೃತ್ತಿ ವೇತನಕ್ಕಾಗಿ ಸೂಕ್ತ ಆದೇಶವನ್ನು ಹೊರಡಿಸುವ ಪೂರ್ವದಲ್ಲಿ ಸರ್ಕಾರದ ಅನುಮತಿಯನ್ನು ಪಡೆಯಲು ಸೂಚಿಸಿರುತ್ತದೆ. ಅಲ್ಲದೆ, ಈ ಸೌಲಭ್ಯವನ್ನು ಪಡೆಯಲಿಚ್ಛಿಸುವ ನೌಕರನು ಸಂದರ್ಭನುಸಾರ ಸರ್ಕಾರಿ ಸೇವೆಗೆ ಸೇರಿದ ದಿನಾಂಕದಿಂದ 3 ವರ್ಷದ ಒಳಗೆ ಅಥವಾ ನಿಯಮದ ಜಾರಿಯ ದಿನಾಂಕದಿಂದ 5 ವರ್ಷದ ಒಳಗೆ ಅಂದರೆ 7-5-2011 ರವರೆಗೆ (ದಿ : 2-7-2010 ರ ವಿಸ್ತರಣಾ ಆದೇಶದ ಅನುಸಾರ) ನೇಮಕ ಪ್ರಾಧಿಕಾರಿಗೆ ಬರಹದಲ್ಲಿ ಕೋರಿಕೆ ಸಲ್ಲಿಸತಕ್ಕದ್ದು ಎಂಬುದಾಗಿದ್ದು ಸದರಿಯವರು ಪಿಎಸ್ಐ ಹುದ್ದೆಯಲ್ಲಿ ಖಾಯಂ ನೌಕರರಾಗಿ ಕರ್ತವ್ಯ ನಿರ್ವಹಿಸಿದ್ದು (ಅವರ ಪರಿಕ್ಷಾರ್ಥ ಅವಧಿಯನ್ನು 30-11-2006 ರಂದು ತೃಪ್ತಿಕರವೆಂದು ಘೋಷಿಸಲಾಗಿರುತ್ತದೆ) ನೇಮಕಾತಿ ಪ್ರಾಧಿಕಾರದಿಂದ ಸೂಕ್ತ ಅನುಮತಿ ಪಡೆದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ (ಬಿ) ರಡಿಯಲ್ಲಿ ಬಿಡುಗಡೆಗೊಂಡಿರುತ್ತಾರೆ. ಅಲ್ಲದೆ, ಸರ್ಕಾರವು ನಿಗದಿಪಡಿಸಿದ ಅವಧಿಯೊಳಗಾಗಿ ಅರ್ಹತಾದಾಯಕ ಸೇವೆಗೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಅವರು ಪಿ.ಎಸ್.ಐ. ಹುದ್ದೆಯಲ್ಲಿ ಖಾಯಂ ನೌಕರರರಾಗಿ ಸಲ್ಲಿಸಿದ ದಿನಾಂಕ : 1-6-2004 ರಿಂದ 30-5-2008 ರವರೆಗಿನ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224ಎ ರನ್ವಯ ಅವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅವಕಾಶವಿರುತ್ತದೆ. ಆದ್ದರಿಂದ, ಸದರಿಯವರು ಪಿ.ಎಸ್.ಐ. ಹುದ್ದೆಯಲ್ಲಿ ಸಲ್ಲಿಸಿದ ದಿನಾಂಕ : 1-6-2004 ರಿಂದ 30-5-2008 ರವರೆಗಿನ ಸೇವಾವಧಿಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗಾಗಿ ಅರ್ಹತಾದಾಯಕ ಸೇವೆಯೆಂದು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224ಎ ರನ್ವಯ ಪರಿಗಣಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ ಶ್ರೀ ಎ. ಕುಮಾರಸ್ವಾಮಿ, ಡಿವೈ.ಎಸ್.ಪಿ. ರವರು ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ ಪಿ.ಎಸ್.ಐ. ಹುದ್ದೆಯಲ್ಲಿ ದಿನಾಂಕ : 1-6-2004 ರಿಂದ 30-5-2008 ರವರೆಗೆ ಸಲ್ಲಿಸಿದ್ದ ಸೇವಾ ಅವಧಿಯಲ್ಲಿ ದಿನಾಂಕ : 16-8-2005 ರಿಂದ 22-8-2005 ರವರೆಗೆ ಒಟ್ಟು 07 ದಿವಸಗಳ ವೇತನ ರಹಿತ ರಜೆಯನ್ನು (L.W.A.) ಪಡೆದಿದ್ದು, ಈ ಅವಧಿಯನ್ನು ಹೊರತುಪಡಿಸಿ, (ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 01 ಎಸ್‌ಆರ್‌ಎ 2011 ದಿನಾಂಕ : 5-3-2011 ರನ್ವಯ) ಉಳಿದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224(ಎ) ರನ್ವಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆನ್ನಾಗಿ ಪರಿಗಣಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 42 ಪೊಸಿಪ 2011, ಬೆಂಗಳೂರು, ದಿನಾಂಕ : 18-10-2011.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಎ. ಕುಮಾರಸ್ವಾಮಿ, ಡಿವೈ.ಎಸ್.ಪಿ. ಬೆಂಗಳೂರು ಗ್ರಾಮಾಂತರ ಉಪ ವಿಭಾಗ ರವರು ಈ ಹಿಂದೆ ಪೊಲೀಸ್ ಇಲಾಖೆಯಲ್ಲಿ ಪಿ.ಎಸ್.ಐ. ಹುದ್ದೆಯಲ್ಲಿ ದಿನಾಂಕ : 1-6-2004 ರಿಂದ 30-5-2008 ರ ವರೆಗೆ ಸಲ್ಲಿಸಿದ ಸೇವಾ ಅವಧಿಯಲ್ಲಿ ದಿನಾಂಕ : 16-8-2005 ರಿಂದ 22-8-2005 ರವರೆಗೆ ಒಟ್ಟು 07 ದಿವಸಗಳು ವೇತನ ರಹಿತ ರಜೆಯನ್ನು (L.W.A.) ಪಡೆದಿದ್ದು, ಈ ಅವಧಿಯನ್ನು ಹೊರತುಪಡಿಸಿ, ಉಳಿದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224(ಎ) ರನ್ವಯ ಅವರ ನಿವೃತ್ತಿ ವೇತನ ಸೌಲಭ್ಯಗಳಿಗಾಗಿ ಮಾತ್ರ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2547

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ಹಲುವಾಗಲು ಠಾಣೆಯ ಶಿಥಿಲಗೊಂಡಿರುವ 9 ಹಳೆಯ ವಸತಿಗೃಹಗಳನ್ನು ನೆಲಸಮಗೊಳಿಸಲು ಮತ್ತು ಸದರಿ ನಿವೇಶನವನ್ನು ಗ್ರಾಮ ಪಂಚಾಯತಿಗೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ : ಬಿ೨ಸಿ/17/2007-08, ದಿನಾಂಕ : 2-9-2011.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 2-9-2011ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಪೊಲೀಸ್ ಇಲಾಖೆಯ ಅಧೀನದಲ್ಲಿರುವ ಸಾರ್ವಜನಿಕ ಬಸ್ ನಿಲ್ದಾಣಕ್ಕೆ ಬಿಟ್ಟು ಕೊಡಲುದ್ದೇಶಿಸಿದ ರಿ.ಸ.ನಂ. 500/1 ರಲ್ಲಿನ 0.89 ಸೆಂಟ್ಸ್ ಬದಲಿಗೆ ಗ್ರಾಮ ಪಂಚಾಯಿತಿಯವರು ನೀಡುವ ಹಲುವಾಗಲು ಗ್ರಾಮ ಪಂಚಾಯ್ತಿಗೆ ಸೇರಿದ ರಿ.ಸ.ನಂ. 289/ಎ/1 ವಿಸ್ತೀರ್ಣ 2 ಎಕರೆ 10 ಸೆಂಟ್ಸ್ ಜಮೀನಿಗೆ ಡಿವೈಎಸ್‌ಪಿ ಹರಪನಹಳ್ಳಿ, ಉಪವಿಭಾಗ ಮತ್ತು ಇತರ ಸಿಬ್ಬಂದಿಗಳು ಭೇಟಿ ನೀಡಿ ಸ್ಥಳ ಪರಿಶೀಲನೆ ಮಾಡಿದ್ದು, ಈ ಸ್ಥಳದಲ್ಲಿ ಈಗಾಗಲೇ ವಿದ್ಯುತ್ ಸರಬರಾಜು ಮತ್ತು ಬೋರ್‌ವೆಲ್ ವ್ಯವಸ್ಥೆ ಇರುತ್ತದೆ. ಅಲ್ಲದೆ ಸದರಿ ಪ್ರದೇಶದಲ್ಲಿ ಈಗಾಗಲೇ ಶಿಕ್ಷಕರ ವಸತಿಗೃಹ (ಗುರುಭವನ) ನಿರ್ಮಾಣಗೊಂಡಿದ್ದು, ಜನವಸತಿ ಪ್ರದೇಶವಾಗಿರುತ್ತದೆ. ಅಲ್ಲದೆ ಹಲುವಾಗಲು ಗ್ರಾಮ ಪಂಚಾಯ್ತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಪೊಲೀಸ್

ಇಲಾಖೆಗೆ ಬಿಟ್ಟುಕೊಡುವ 2 ಎಕರೆ 10 ಸೆಂಟ್ಸ್ ಜಮೀನಿಗೆ ಗ್ರಾಮ ಪಂಚಾಯ್ತಿ ವತಿಯಿಂದ ಕುಡಿಯುವ ನೀರಿನ ಸೌಲಭ್ಯ, ಮುಂದಿನ ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ಬಾಕ್ಸ್ ಚರಂಡಿ ವ್ಯವಸ್ಥೆ, ವಿದ್ಯುತ್ ಪ್ರಸರಣ ಇಲಾಖೆಯ ಸಹಯೋಗದೊಂದಿಗೆ ಪತ್ರ ವ್ಯವಹಾರ ಮಾಡಿ, ಪಂಚಾಯತ್‌ದಲ್ಲಿನ ಕ್ರಿಯಾ ಯೋಜನೆಯನ್ನು ಅಳವಡಿಸಿಕೊಂಡು, ಹಂತ ಹಂತವಾಗಿ ಸೌಕರ್ಯಗಳನ್ನು ಒದಗಿಸಿಕೊಡಲು ಸಿದ್ದರಿರುವುದಾಗಿ ಲಿಖಿತ ಪತ್ರವನ್ನು ನೀಡಿರುವುದಾಗಿ ಈ ಜಮೀನಿಗೆ ರಸ್ತೆ ಸೌಲಭ್ಯ ಇದ್ದು, ಪೊಲೀಸ್ ಇಲಾಖೆಯಿಂದ ವಸತಿ ಗೃಹಗಳನ್ನು ನಿರ್ಮಾಣ ಮಾಡಿಕೊಂಡು ವಾಸಿಸಲು ಎಲ್ಲಾ ಮೂಲಭೂತ ಸೌಲಭ್ಯಗಳೊಂದಿಗೆ ಯೋಗ್ಯವಾಗಿರುತ್ತದೆ. ಅಲ್ಲದೆ ಪೊಲೀಸ್ ಇಲಾಖೆಗೆ ಸೇರಿದ ರಿ.ಸ.ನಂ. 500/1ರ 0.89 ಸೆಂಟ್ಸ್ ವಿಸ್ತೀರ್ಣವುಳ್ಳ ಖಾಲಿ ನಿವೇಶನವನ್ನು ಹಲುವಾಗಲು ಗ್ರಾಮ ಪಂಚಾಯಿತಿಗೆ ಸಾರ್ವಜನಿಕ ಬಸ್ ನಿಲ್ದಾಣ ನಿರ್ಮಾಣಕ್ಕಾಗಿ ಬಳಸಿಕೊಳ್ಳುವ ಸಲುವಾಗಿ ಕರಾರು ಪತ್ರವನ್ನು ಗ್ರಾಮ ಪಂಚಾಯತಿ ಅಭಿವೃದ್ಧಿ ಅಧಿಕಾರಿ ಗ್ರಾಮ ಪಂಚಾಯ್ತಿ ಹಲುವಾಗಲುರವರಿಂದ ಹಸ್ತಾಂತರ ಪಡೆದು ಕರಾರು ಪತ್ರವನ್ನು ಕಾರ್ಯನಿರ್ವಾಹಕ ಅಧಿಕಾರಿಗಳು ಹರಪನಹಳ್ಳಿ ತಾಲ್ಲೂಕು ಪಂಚಾಯಿತಿರವರ ಮುಖಾಂತರ ದಾವಣಗೆರೆ ಜಿಲ್ಲಾ ಪಂಚಾಯತಿ ಮುಖ್ಯ ನಿರ್ವಾಹಕ ಅಧಿಕಾರಿರವರಿಂದ ಅನುಮೋದನೆ ಪಡೆದಿದ್ದು, ಅಂತೆಯೇ, ಈ ನಿವೇಶನಗಳನ್ನು ಪರಸ್ಪರ ಬದಲಾಯಿಸಿಕೊಳ್ಳಬಹುದು ಎಂದು ಅಭಿಪ್ರಾಯಪಡಲಾಗಿದೆ. ಆದ್ದರಿಂದ, ಹಲುವಾಗಲು ಠಾಣೆಯ ಶಿಥಿಲಗೊಂಡಿರುವ 9 ಹಳೆಯ ವಸತಿ ಗೃಹಗಳನ್ನು ನೆಲಸಮಗೊಳಿಸಲು ಅನುಮತಿ ಹಾಗೂ 24 ವಸತಿಗೃಹಗಳನ್ನು ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 4055–0–211–01–211 ರಡಿ ರೂ. 210.70 ಲಕ್ಷ ಹೆಚ್ಚುವರಿ ಅನುದಾನ ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಪರಿಶೀಲಿಸಿ, ಹಲುವಾಗಲು ಗ್ರಾಮ ಪಂಚಾಯ್ತಿಗೆ ಸೇರಿದ ರಿ.ಸ.ನಂ. 289/ಎ/1 ವಿಸ್ತೀರ್ಣ 2 ಎಕರೆ 10 ಸೆಂಟ್ಸ್ ಜಮೀನನ್ನು ಪೊಲೀಸ್ ಇಲಾಖೆಗೆ ಹಾಗೂ ಪೊಲೀಸ್ ಇಲಾಖೆಗೆ ಸೇರಿದ ರಿ.ಸ.ನಂ. 500/1 ರಲ್ಲಿನ 0.89 ಸೆಂಟ್ಸ್ ವಿಸ್ತೀರ್ಣವುಳ್ಳ ಖಾಲಿ ನಿವೇಶನವನ್ನು ಗ್ರಾಮ ಪಂಚಾಯತಿಗೆ ಪರಸ್ಪರ ವರ್ಗಾವಣೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಮತ್ತು 24 ವಸತಿಗೃಹಗಳ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 4055–0–211–01–211 ರಡಿ ರೂ. 210.70 ಲಕ್ಷಗಳ ಹೆಚ್ಚುವರಿ ಅನುದಾನ ಮಂಜೂರು ಮಾಡುವ ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಕಳುಹಿಸಿಕೊಡುವಂತೆ ತಿಳಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 81 ಪಿಬಿಎಲ್ 2009, ಬೆಂಗಳೂರು, ದಿನಾಂಕ : 15–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಸ್ತುತ ಪ್ರಕರಣದಲ್ಲಿ ಸಲ್ಲಿಸಿರುವ ದಿನಾಂಕ : 06–11–2009ರ ದಾನಪತ್ರ ಮತ್ತು ದಿನಾಂಕ : 11–2–2011ರ ಕರಾರು ಪತ್ರ ಮತ್ತು ಇತರೆ ದಾಖಲೆಗಳನ್ನು ಪರಿಶೀಲಿಸಲಾಗಿ, ಪೊಲೀಸ್ ಇಲಾಖೆಯ ವಶದಲ್ಲಿ ಸರ್ವೆ ನಂ. 323 (500/ಎ) ಒಟ್ಟು 2 ಎಕರೆ 73 ಸೆಂಟ್ಸ್ ಜಾಗವಿದ್ದು, ಇದರಲ್ಲಿ 09 ಶಿಥಿಲಗೊಂಡಿರುವ ಪೊಲೀಸ್ ವಸತಿಗೃಹಗಳನ್ನು ಗ್ರಾಮ ಪಂಚಾಯತಿ ವತಿಯಿಂದ ನೆಲಸಮಗೊಳಿಸಿಕೊಳ್ಳುವ ಷರತ್ತಿನ ಮೇರೆಗೆ ಇದರಲ್ಲಿ 89 ಸೆಂಟ್ಸ್ ಜಾಗವನ್ನು ಹಲುವಾಗಲು ಗ್ರಾಮ ಪಂಚಾಯಿತಿಗೆ ಬಸ್ ನಿಲ್ದಾಣದ ನಿರ್ಮಾಣಕ್ಕೆ ವರ್ಗಾಯಿಸಲು ಮತ್ತು ಮೂಲತಃ ಶ್ರೀಮತಿ ಮಹದೇವಕ್ಕ ಗಂಡ ರಾಮಚಂದ್ರಪ್ಪ ಇವರು ದಾನವಾಗಿ ನೀಡಿರುವ ಹಲುವಾಗಲು ಗ್ರಾಮದ ಸರ್ವೆ ನಂ. 289/ಎ/1 ರಲ್ಲಿನ 2 ಎಕರೆ 10 ಸೆಂಟ್ಸ್ ಜಾಗವನ್ನು ಪೊಲೀಸ್ ಇಲಾಖೆಗೆ ನೋಂದಣಿ ಮಾಡಿಸಿ ಗ್ರಾಮ ಪಂಚಾಯಿತಿಯು ಖಾತೆ ಬದಲಾವಣೆ ಮಾಡಿಸಿಕೊಟ್ಟಿದ್ದು, ಈ ಎರಡು ನಿವೇಶನಗಳ ಪರಸ್ಪರ ವರ್ಗಾವಣೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಒಸಾಇ 44549 ಅಂಆಸ 2011 ದಿನಾಂಕ: 29–9–2011ರ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ : 01 : ಟಿ.ಎಫ್.ಪಿ. : 2008, ದಿನಾಂಕ : 16–5–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಪಿ.ಆರ್. 2548

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ವೆಚ್ಚ).

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 2011–12ನೇ ಸಾಲಿನಲ್ಲಿ ಪ್ರಧಾನ ಲೆಕ್ಕಶೀರ್ಷಿಕೆ 5054 ರ ಅಡಿಯಲ್ಲಿ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ ಕ.ರ.ಅ.ನಿ.ನಿ : ಎಂ–ಎಫ್ ಅಂಡ್ ಎ : 2011–12 : 1538, ದಿನಾಂಕ : 23–9–2011.

**ಪ್ರಸ್ತಾವನೆ :**

2011–12ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಅಡಿಯಲ್ಲಿ ಬಂಡವಾಳ ಕಾಮಗಾರಿಗಳಿಗಾಗಿ ರೂ. 180.00 ಕೋಟಿಗಳನ್ನು ಒದಗಿಸಲಾಗಿರುತ್ತದೆ.

ಇದರಲ್ಲಿ 11 ನೇ ಅನ್ನ್ಯೂಟಿ ಪಾವತಿಗಾಗಿ ರೂ. 29.70 ಕೋಟಿಗಳನ್ನು ಸದರಿ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಬಿಡುಗಡೆ ಮಾಡುವಂತೆ, ಉಲ್ಲೇಖಿತ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರದಲ್ಲಿ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 51 ಇಎಪಿ 2011, ಬೆಂಗಳೂರು, ದಿನಾಂಕ : 20–10–2011.**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡ ಕಾಮಗಾರಿಯ 11ನೇ ಅನ್ನ್ಯೂಟಿ ಪಾವತಿಗಾಗಿ 2011–12ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 5054–80–190–0–01–132 ಬಂಡವಾಳ ವೆಚ್ಚಗಳು (ಯೋಜನೆ) ಅಡಿಯಲ್ಲಿ ರೂ. 29.70 ಕೋಟಿಗಳನ್ನು (ಇಪ್ಪತ್ತೊಂಬತ್ತು ಕೋಟಿ ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ "ಗುತ್ತಿಗೆ ಕರಾರಿನಲ್ಲಿರುವಂತೆ ಎಲ್ಲಾ ಮಾನದಂಡಗಳನ್ವಯ (all parameters) ರಸ್ತೆಯ ನಿರ್ವಹಣೆಯನ್ನು ಮಾಡುವಂತೆ ಲಿಖಿತ ರೂಪದಲ್ಲಿ ಖಚಿತ ಪಡಿಸಿಕೊಂಡು ಪಾವತಿಸುವ ಷರತ್ತಿನೊಂದಿಗೆ" ಹಣ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 29.70 ಕೋಟಿ ರೂ.ಗಳನ್ನು (ಇಪ್ಪತ್ತೊಂಬತ್ತು ಕೋಟಿ ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ. 17 (ಸಿ) 4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು, ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಹಿರಿಯ ನಿರ್ದೇಶಕರು (ಆರ್ಥಿಕ) ಹಾಗೂ ಪದನಿಮಿತ್ತ ಸರ್ಕಾರದ ವಿಶೇಷ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 797 ಆಕೋ–1/11 ದಿನಾಂಕ : 20–10–2011 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಪಿ.ಆರ್. 2549

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ

ಒಳನಾಡು ಜಲಸಾರಿಗೆ ಇಲಾಖೆ. (ಇಎಪಿ).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶೇಖ್‌ಸೌದ್, ನಿವೃತ್ತ ಕಾನೂನು ಸಲಹೆಗಾರರು, ಸಿ.ಐ.ಡಿ. ಬೆಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ. ಒಇ 637 ಪಿಪಿಇ 2005, ದಿನಾಂಕ : 29–5–2010.

2. ಸರ್ಕಾರದ ತಿದ್ದುಪಡಿ ಅದೇಶ ಸಂ. ಒಇ 637 ಪಿಪಿಇ 2005, ದಿನಾಂಕ : 28–7–2010.

3. ವಿಚಾರಣಾಧಿಕಾರಿಯ ಇಲಾಖಾ ವಿಚಾರಣಾ ವರದಿಯ ದಿನಾಂಕ : 23–8–2011.

**ಪ್ರಸ್ತಾವನೆ :**

**ಮೇಲೆ (1) ರಲ್ಲಿ ಓದಲಾದ ದಿನಾಂಕ : 20–5–2010ರ ಸರ್ಕಾರದ ಆದೇಶದಲ್ಲಿ** ಶ್ರೀ ಶೇಖ್‌ಸೌದ್, ನಿವೃತ್ತ ಕಾನೂನು ಸಲಹೆಗಾರರು, ಸಿ.ಐ.ಡಿ. ಬೆಂಗಳೂರು ಇವರು 2006–07 ರ ಸಾಲಿನ ಆಸ್ತಿ ಮತ್ತು ದಾಯಿತ್ವದ ಪಟ್ಟಿಯ ಸಂಬಂಧ ಕೋರಲಾದ ವಿವರಗಳ ಸಂಬಂಧ ಅನಾವಶ್ಯಕ ಪತ್ರ ವ್ಯವಹಾರಕ್ಕೆ ಅವಕಾಶ ಮಾಡಿಕೊಟ್ಟು ಬೇಜವಾಬ್ದಾರಿಯಿಂದ ಕರ್ತವ್ಯ ನಿರ್ಲಕ್ಷ ತೋರಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966ರ ನಿಯಮ 3(1) ರ ಉಪನಿಯಮ (iii) ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಫೀಲು) ನಿಯಮಗಳು, 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಲು ಶ್ರೀ ವಿ.ಕೆ. ದ್ವಾರಕನಾಥ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 20, 2ನೇ ಕ್ರಾಸ್, ಜುಡಿಷಿಯಲ್ ಆಫೀಸರ್ಸ್ ಕ್ವಾರ್ಟರ್ಸ್ ಲೇಔಟ್, ಸಂಜಯನಗರ, 2ನೇ ಹಂತ, ಬೆಂಗಳೂರು–94, ಇವರನ್ನು ಸದರಿ ನಿಯಮದ ಉಪನಿಯಮ 2ರನ್ವಯ ವಿಚಾರಣಾಧಿಕಾರಿಯನ್ನಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಸದರಿ ನಿಯಮದ ಉಪನಿಯಮ (5)(ಸಿ)ರ ಅನ್ವಯ ಶ್ರೀ ಜೆ.ಎನ್. ದೇಸಾಯಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಕಾವೇರಿ ಭವನ, ಬೆಂಗಳೂರು–9 ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ : 28–7–2010ರ ಸರ್ಕಾರದ ತಿದ್ದುಪಡಿ ಆದೇಶದಲ್ಲಿ ಆದೇಶ ಸಂ. ಒಇ 637 ಪಿಪಿಇ 2005, ದಿನಾಂಕ : 29–5–2010 ರನ್ವಯ ವಿಚಾರಣಾಧಿಕಾರಿಯಾದ ಶ್ರೀ ವಿ.ಕೆ. ದ್ವಾರಕನಾಥ್ ಇವರ ಬದಲಾಗಿ "ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 768, 9ನೇ ಮೈನ್, 3ನೇ ಬ್ಲಾಕ್, 3ನೇ ಹಂತ ಬಸವೇಶ್ವರನಗರ, ಬೆಂಗಳೂರು–79" ಇವರನ್ನು ನೇಮಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ವಿಚಾರಣಾಧಿಕಾರಿಯ ದಿನಾಂಕ : 23–8–2011ರ ಇಲಾಖಾ ವಿಚಾರಣಾ ವರದಿಯಲ್ಲಿ ಶಿಸ್ತು ಪ್ರಾಧಿಕಾರವು ಆರೋಪಿತ ಅಧಿಕಾರಿಯ ಮೇಲಿನ ದೊಷಾರೋಪಗಳನ್ನು ರುಜುವಾತುಪಡಿಸಲು ಅಸಮರ್ಥಗೊಂಡಿದೆ ಎಂದು ಅಭಿಪ್ರಾಯಿಸುತ್ತಾ, ಆರೋಪ (1) ರಿಂದ (3)ನ್ನು 'ನ' ಕಾರಾತ್ಮಕವೆಂದು ವರದಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 637 ಪಿಪಿಇ 2005, ಬೆಂಗಳೂರು, ದಿನಾಂಕ : 18ನೇ ಅಕ್ಟೋಬರ್ 2011.**

ಮೇಲಿನ ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ ಶ್ರೀ ಶೇಖ್‌ಸೌಧ, ನಿವೃತ್ತ ಕಾನೂನು ಸಲಹೆಗಾರರು, ಸಿ.ಐ.ಡಿ. ಬೆಂಗಳೂರು ಇವರು 2006–07 ನೇ ಸಾಲಿನ ಆಸ್ತಿ ಮತ್ತು ದಾಯಿತ್ವ ಪಟ್ಟಿಯನ್ನು ಸಲ್ಲಿಸುವ ಸಂಬಂಧ ಬೇಜವಾಬ್ದಾರಿಯಿಂದ ಕರ್ತವ್ಯ ನಿರ್ಲಕ್ಷ ತೋರಿಸಿದ್ದರ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ನಡೆಸಿ, ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1)ರ ಉಪನಿಯಮ (iii) ವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವ ಆರೋಪದಿಂದ ಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಪಿ.ಆರ್. 2550

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು–ಬಿ).

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಶಶಿಕುಮಾರ್, ಮಾಜಿ ಪಿ.ಸಿ., ಶ್ರವಣಬೆಳಗೊಳ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(1)/ಇವಿ–15/2006 (ಓ.ಬಿ. 33/09) ದಿನಾಂಕ: 28–6–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: 32/2010–11 (ಓ.ಬಿ. ಸಂಖ್ಯೆ : 43/2010–11) ದಿನಾಂಕ: 18–11–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11–4–11
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/9/2011–12, ದಿನಾಂಕ: 13–7–2011

**ಪ್ರಸ್ತಾವನೆ :**

ಶ್ರೀ ಶಶಿಕುಮಾರ್, ಇವರು ಶ್ರವಣಬೆಳಗೊಳ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್, ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವುದು ಹಾಗೂ ಕ್ರಿಮಿನಲ್ ಪ್ರಕರಣ ಒಂದರಲ್ಲಿ ಆರೋಪಿಯಾಗಿ ಇಲಾಖೆಯ ಗೌರವಕ್ಕೆ ದಕ್ಕೆತಂದು, ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1. ಸಿ.ಪಿ.ಸಿ. 430 ಶಶಿಕುಮಾರ ಶ್ರವಣಬೆಳಗೊಳ ಆದ ನೀವು ದಿನಾಂಕ : 28–5–2006 ರಿಂದ 31–5–2006 ರವರೆಗೆ 4 ದಿವಸ ಸಾಂದರ್ಭಿಕ ರಜೆಯ ಮೇಲೆ ಹೋದವರು ದಿನಾಂಕ : 1–6–2006 ರಂದು ಪುನಃ ಕರ್ತವ್ಯಕ್ಕೆ ಹಾಜರಾಗದೇ ದಿನಾಂಕ : 24–6–2006 ವರೆಗೆ ಅನಧಿಕೃತ ಗೈರುಹಾಜರಾಗಿ ಜವಾಬ್ದಾರಿಯುತ ಪೊಲೀಸ್ ನೌಕರರಾದ ನೀವು ಪದೇ ಪದೇ ಕರ್ತವ್ಯಕ್ಕೆ ಗೈರುಹಾಜರಾಗುವ ಪ್ರವೃತ್ತಿಯನ್ನು ತೋರ್ಪಡಿಸಿರುತ್ತೀರಿ.

2. ಚನ್ನರಾಯಪಟ್ಟಣ ಹೌಸಿಂಗ್ ಬೋರ್ಡ್‌ನಲ್ಲಿ ವಾಸವಾಗಿರುವ ಬಿ.ಹೆಚ್. ಹರಿ ಎಂಬುವರು ಚನ್ನರಾಯಪಟ್ಟಣ ನಗರದಲ್ಲಿ ಇನ್ನಿತರ ನಾಲ್ಕು ಜನರೊಂದಿಗೆ ಸೇರಿ ಸಂಯಮ ಫೈನಾನ್ಸ್ ನಡೆಸುತ್ತಿರುವುದರಲ್ಲಿ ಸಿಪಿಸಿ 430 ಶಶಿಕುಮಾರ್ ಆದ ನೀನು ನಿಮ್ಮ ಹೆಂಡತಿ ಹೆಸರಿನಲ್ಲಿ ಪಾಲುದಾರನಾಗಿ ವ್ಯವಹರಿಸಿಕೊಂಡು ಬಂದಿದ್ದು ದಿನಾಂಕ : 1–7–2006 ರಂದು ಸದರಿ ಹರಿ ಎಂಬುವವರು ರಾತ್ರಿ 10–45 ರಲ್ಲಿ ಹೀರೋ ಹೋಂಡಾ ಮೋಟಾರ್ ಸೈಕಲ್ ಸಂಖ್ಯೆ : ಕೆಎ 13–ಕ್ಯೂ 9048 ಹೊ.ನ.ಪುರ ರಸ್ತೆ ಮಾರನಹಳ್ಳಿ ಹತ್ತಿರ ಬರುವಾಗ ಸದರಿ ಆಪಾದಿತರು ಇತರೆ 4 ಜನರೊಂದಿಗೆ ಅಕ್ರಮಕೂಟ ಕಟ್ಟಿಕೊಂಡು ಟಾಟಾಸುಮೋ ವಾಹನದಲ್ಲಿ ಏಕಾಏಕಿ ಬಂದು ಅವರನ್ನು ಹಿಡಿದು ಕೂಗಾಡದಂತೆ ಬಾಯಿ ಮುಚ್ಚಿ ಕೈಗೆ ಬಾಯಿಗೆ ಬಟ್ಟೆ ಕಟ್ಟಿ ಹಗ್ಗದಿಂದ ಕೈಕಟ್ಟಿ ಸದರಿ ಟಾಟಾ ಸುಮೋ ವಾಹನದಲ್ಲಿ ಕರೆದುಕೊಂಡು ಹೋಗಿ ಯಾವುದೋ ರೂಮಿನಲ್ಲಿ ಕಾನೂನು ಬಾಹಿರವಾಗಿ ಕೂಡಿಹಾಕಿ ಆತನ ಬಳಿ ಇದ್ದ ಮೊಬೈಲ್ ಪೋನ್ ಹಾಗೂ 3,200 ರೂಗಳನ್ನು ಕಿತ್ತುಕೊಂಡು ಸ್ವಲ್ಪ ಸಮಯದ ನಂತರ 20,000/– ಹಣ ಕೊಟ್ಟರೆ ಬಿಡುವುದಾಗಿ ಇಲ್ಲದಿದ್ದರೆ ಕೊಲೆ ಮಾಡುವುದಾಗಿ ಪ್ರಾಣ ಬೆದರಿಕೆ ಹಾಕಿ ಗಂಭೀರ ಸ್ವರೂಪದ ದುಷ್ಕೃತ್ಯವನ್ನು ಎಸಗಿದ್ದು, ಹಾಗೂ ಈ ಅಕ್ರಮ ಬಂಧನದಿಂದ ಸದರಿ ಬಿ.ಹೆಚ್. ಹರಿರವರು ದಿನಾಂಕ : 2–7–2006 ರಂದು ಸಮಯ ಕಾಯ್ದು ಅಲ್ಲಿಂದ ತಪ್ಪಿಸಿಕೊಂಡು ಬಂದು ಉಳುವಾರೆ ಗ್ರಾಮದ ಗ್ರಾಮಸ್ಥರ ಹಾಗೂ ಶ್ರೀ ರಾಮಚಂದ್ರ ಹಾಗೂ ಇತರರ ಸಹಾಯದಿಂದ ಚನ್ನರಾಯಪಟ್ಟಣಕ್ಕೆ ಬಂದು ಚನ್ನರಾಯಪಟ್ಟಣ ನಗರ ಠಾಣೆಗೆ ನೀಡಿದ ಪಿರ್ಯಾದಿನ ಮೇರೆಗೆ ಚನ್ನರಾಯಪಟ್ಟಣ ನಗರ ಠಾಣೆಯಲ್ಲಿ ದಾಖಲಿಸಿದ ಪ್ರಕರಣ ಸಂಖ್ಯೆ : 119/1006 ಕಲಂ 365 ರೆ/ವಿ 34 ಐಪಿಸಿ ಪ್ರಕರಣದಲ್ಲಿ ಆರೋಪಿಯಾಗಿ ಇಲಾಖೆಯ ಗೌರವಕ್ಕೆ ಚ್ಯುತಿಯುಂಟುಮಾಡಿ ಕರ್ತವ್ಯದಲ್ಲಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 28–6–10ರ ಆದೇಶದಲ್ಲಿ ಅರ್ಜಿದಾರರನ್ನು ಇವರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ : 28–5–2006 ರಿಂದ 9–7–2006 ರವರೆಗೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ವೇತನ ರಹಿತ ರಜೆಯೆಂದು ಅಮಾನತ್ತಿನ ಅವಧಿಯನ್ನು ಈಗಾಗಲೇ ಪಡೆದಿರುವ ಜೀವನಾಧಾರ ಭತ್ಯಕ್ಕೆ ಸಮಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 18–11–10ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ,

ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 45 ಪೊಸಿಅ 2011, ಬೆಂಗಳೂರು, ದಿನಾಂಕ : 15–10–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಶಿಕುಮಾರ್, ಮಾಜಿ ಪಿ.ಸಿ., ಶ್ರವಣಬೆಳಗೊಳ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಪಿ.ಆರ್. 2551

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ. ಶ್ರೀನಿವಾಸ್, ಹೆಚ್.ಸಿ. 2932, ಎಸ್. ಜೆ. ಪಾರ್ಕ್ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ : ಡಿಇ/01/ಆರ್–7/ಡಿಸಿಪಿ(ಕೇ)/2010 ದಿನಾಂಕ: 08–06–2010,
2. ಮೇಲ್ಮನವಿ ಪ್ರಾಧಿಕಾರ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ : 39/ಅಪೀಲು(1)/2010 ದಿನಾಂಕ : 27–10–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 07–12–10.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2)/77/2010–11 ದಿನಾಂಕ : 16–07–2011.

**ಪ್ರಸ್ತಾವನೆ :**

ಶ್ರೀ ಬಿ. ಶ್ರೀನಿವಾಸ, ಹೆಚ್.ಸಿ. ಇವರು ಬೆಂಗಳೂರಿನ ಎಸ್. ಜೆ. ಪಾರ್ಕ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿ, ಅಧಿಕಾರ ದುರುಪಯೋಗಪಡಿಸಿಕೊಂಡ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7ರಡಿ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಬಿ. ಶ್ರೀನಿವಾಸ್, ಹೆಚ್.ಸಿ. 2932, ಎಸ್.ಜೆ. ಪಾರ್ಕ್ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನಿಮ್ಮನ್ನು ದಿನಾಂಕ : 08–09/01/10 ರಂದು ಶ್ರೀ ತುಕಾರಾಂ ನಾಯಕ್, ಪಿ.ಸಿ. 10777 ರವರೊಂದಿಗೆ 4ನೇ ಬೀಟ್ ರಾತ್ರಿ ಕರ್ತವ್ಯಕ್ಕೆ ನೇಮಿಸಿದ್ದು, ನೀವು ಶ್ರೀ ಮಝರ್ ಬಿನ್ ಸಾಬ್‌ಜಾನ್ ಎಂಬುವವರು ರಾಯ್‌ಪುರದಿಂದ ತಮ್ಮ ಲಾರಿ ನಂ. ಎಪಿ–07–ಯು–9394 ರಲ್ಲಿ ವೈರ್ ಬಂಡಲ್‌ಗಳನ್ನು ತೆಗೆದುಕೊಂಡು ಬೆಂಗಳೂರಿನ ಎಸ್.ಜೆ.ಪಿ. ರಸ್ತೆ ಕ್ರಾಸ್‌ನಲ್ಲಿರುವ ಶಾಂತಪ್ಪಲೇನ್‌ನ ಕೆ. ಆರ್. ಮಂಜುನಾಥರವರ ಅಂಗಡಿಗೆ ಅನ್‌ಲೋಡ್ ಮಾಡಲು ಲಾರಿಯನ್ನು ಅಂಗಡಿ ಮುಂಭಾಗ ನಿಲ್ಲಿಸಿಕೊಂಡಿರುವಾಗ್ಗೆ ಬೆಳಿಗ್ಗೆ 6–00 ಗಂಟೆಗೆ ಹಣ 50/– ರೂ ಕೊಡುವಂತೆ ಕೇಳಿದಾಗ ಪಿರ್ಯಾದುದಾರರು 20 ರೂ ಕೊಡುವುದಾಗಿ ಹೇಳಿದಾಗ ಪಿ.ಸಿ. 10777 ಶ್ರೀ ತುಕಾರಾಂ ನಾಯಕ್ ಮತ್ತು ಶ್ರೀ ಬಿ. ಶ್ರೀನಿವಾಸ್ ಹೆಚ್. ಸಿ. 2932 ಆದ ನೀವುಗಳು ಲಾಠಿಯಿಂದ ಪಿರ್ಯಾದುದಾರರ ಕೈ ಕಾಲು ಮತ್ತು ಕುಂಡಿಯ ಮೇಲೆ ಹೊಡೆದು ನೋವುಂಟು ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿ ಅಧಿಕಾರವನ್ನು ದುರುಪಯೋಗ ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ : 08–06–2010 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮೂರು ತಿಂಗಳ ಕಾಲ ಮುಂದೂಡಲಾಗಿದೆ. ದಿನಾಂಕ 21–01–2010 ರಿಂದ 18–12–2010 ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ : 27–10–2010 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 187 ಪೊಸಿಅ 2010, ಬೆಂಗಳೂರು, ದಿನಾಂಕ: 15 ನೇ ಅಕ್ಟೋಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963 ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ. ಶ್ರೀನಿವಾಸ್, ಹೆಚ್.ಸಿ. 2932, ಎಸ್. ಜೆ. ಪಾರ್ಕ್ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್.2552

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## FOREST, ECOLOGY AND ENVIRONMENT SECRETARIAT

**Sub :** Division of 0.98 ha. Of forest land for the purpose of Drinking Water Storage Tank at Bisanal village under Water Supply Scheme to Machakanur and other 9 Villages in Mudhol Taluk of Bagalkote District in favour of the Executive Engineer, Panchayath Raj (Engineering) Division, Bagalkote.

**Read :** 1. Letter No. A5(3) GFL.CR.80/08-09, dated : 26-06-2010 of principal Chief Conservator of Forests, Bangalore.

**2.** Government of India letter No. F. No. 11-9/98-FC, dated : 03-01-2005 and 11-09-2009.

**Preamble:**

The Principal Chief Conservator of Forests, Bangalore vide his letter dated 26-06-2010 read at (1) above has submitted the proposal for diversion of 0.98 ha. Of forest land for the purpose of Drinking Water Storage Tank at Bisanal Village under Water Supply Scheme to Machakanur and other 9 Villages in Mudhol Taluk of Bagalkote District in favour of the Executive Engineer, Panchayath Raj (Engineering) Division, Bagalkote under the Forest (Conservation) Act, 1980, subject to certain conditions.

This proposal has been examined as per the general approval of Government of India in its letter dated : 03-01-2005 and 11-09-2009 it has been decided to accord sanction for diversion of 0.98 ha. Of forest land under the forest (Conservation) Act, 1980. The proposal has been examined in detail and hence the order.

**Government Order No. FEE 105 FLL 2010, Bangalore, Dated 18th October 2011.**

In the circumstances explained in the preamble above and in accordance with the general approval given by Government of India in their letters dated : 03-01-2005 and 11-09-2009, Government is pleased to accord approval under Forest (Conservation) Act, 1980 for diversion of 0.98 ha. Of frest land for the purpose of Drinking Water Storage Tank at Bisanal Village under Water Supply Scheme to Machakanur and other 9 Villages in Mudhol Taluk of Bangalore district in favour of the Executive Engineer, Panchyath Raj (Engineering) Division, Bagalkote subject to the following conditions.

1. The legal status of the forest land shall continue to be as forest land.
2. The land shall be utilized only for the purpose for which it is released.
3. The User Agency has to pay the lease rent as fixed by the government at the time of sanction and any subsequent Orders in this regard.
4. The lease tenure is for a period of 20 (Twenty) years.
5. The Karnataka Forest Act 1963 and Rules 1969 and other relevant Acts and Rules will be applicable for any violation.
6. If the land is not utilized for the stipulated purpose within two years for which it is granted, the Forest land shall be resumed back to the Karnataka Forest Department by the Conservator of Forests following the provisions under Section 82 of the Karnataka Forest Act, 1963.
7. Any other condition imposed by the Government of India/the Government of Karnataka and the Principal Chief Conservator of Forests (Head of Forest Force) Bangalore from time to time will have to be abided by the lessee.

By Order and in the name of the Governor of Karnataka,

**G.H. Anasuyamma**

PR. 2553

Under Secretary to Government,

Forest, ecology and Environment Department

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಬೆಂಗಳೂರಿನ ವಿದ್ಯುನ್ಮಾನ ನಗರದಲ್ಲಿನ, ಇಂಟರ್‌ನ್ಯಾಷನಲ್ ಇನ್ಸಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಇದರ ಕ್ಯಾಂಪಸ್ ವಿಸ್ತರಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು ಇಂಟರ್‌ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಬೆಂಗಳೂರು ಇವರ ಪತ್ರ ಸಂಖ್ಯೆ : ಐಐಐಟಿ–ಬಿ/ಬಿಲ್ಡಿಂಗ್ಸ್/2011 ದಿನಾಂಕ : 25–07–2011.

**ಪ್ರಸ್ತಾವನೆ :**

ಇಂಟರ್‌ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಬೆಂಗಳೂರು, ಸಂಸ್ಥೆಯು ಸರ್ಕಾರದ ಆದೇಶ ಸಂಖ್ಯೆ : ಸಿಐ/148/ಎಸ್.ಟಿ.ಐ/98 ದಿನಾಂಕ : 10–07–1998 ರನ್ವಯ ಸ್ಥಾಪಿಸಲಾಯಿತು. ಅಂದಿನಿಂದ ಕರ್ನಾಟಕ ಸರ್ಕಾರವು ಸದರಿ ಸಂಸ್ಥೆಗೆ ಅನುದಾನವನ್ನು

ಅದರಲ್ಲೂ ಮೂಲಭೂತ ಸೌಕರ್ಯವನ್ನು ಒದಗಿಸಲು ಹಾಗೂ ಉನ್ನತೀಕರಿಸಲು ನೀಡಲಾಗಿದೆ. ಐಐಐಟಿ–ಬಿ ಸಂಸ್ಥೆಯು ಎಮ್.ಟೆಕ್ ಸ್ನಾತಕೋತ್ತರ ಶಿಕ್ಷಣವನ್ನು ನೀಡುವುದರಲ್ಲಿ ತೊಡಗಿರುವುದಲ್ಲದೇ, ಪಿ.ಹೆಚ್.ಡಿ ಕೋರ್ಸ್‌ಗಳನ್ನು ಸಹ ನೀಡುತ್ತಿದೆ. ಐಐಐಟಿ–ಬಿ ಸಂಸ್ಥೆಯು ಪೂರ್ಣ ಸ್ವರೂಪದ ವಿಶ್ವವಿದ್ಯಾನಿಲಯವಾಗಿ ಬೆಳೆದು ಸುಮಾರು 1200 ವಿದ್ಯಾರ್ಥಿಗಳಿಗೆ ಎಮ್.ಟೆಕ್. ಪದವಿಯನ್ನು ನೀಡಿರುತ್ತದೆ.

ನಿರ್ದೇಶಕರು, ಐಐಐಟಿ–ಬಿ ಇವರು ಲೇಡೀಸ್ ಹಾಸ್ಟೆಲ್, ಫುಡ್ ಕೋರ್ಟ್, ಹಾಗೂ ಮಲ್ಟಿಪರ್ಪಸ್ ಹಾಲ್ ಕಲ್ಪಿಸಲು ಕಟ್ಟಡದ ವಿಸ್ತರಣೆಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ನಿರ್ಮಾಣದ ಅಂದಾಜು ವೆಚ್ಚವು ರೂ. 9.47 ಕೋಟಿಗಳು ಎಂದು ಅಂದಾಜಿಸಲಾಗಿದೆ. ನಿರ್ದೇಶಕರು, ವಿದ್ಯಾರ್ಥಿನಿಯರ ಪ್ರವೇಶವು 1999 ರಲ್ಲಿ ಸುಮಾರು ಶೇ. 3. ರಷ್ಟಿದ್ದು, 2011 ರಲ್ಲಿ ಶೇ. 40 ರಷ್ಟಕ್ಕೆ ಏರಿಕೆಯಾಗಿದೆಯೆಂದು ವರದಿ ಮಾಡಿರುತ್ತಾರೆ. ಐಐಐಟಿ–ಬಿ ಸಂಸ್ಥೆಯು ಪ್ರಸ್ತುತ ಪ್ರತಿ ವರ್ಷ ಸುಮಾರು 75 ವಿದ್ಯಾರ್ಥಿಗಳಿಗೆ ಪ್ರವೇಶ ಮಾಡಿಕೊಳ್ಳುತ್ತಿದೆ. ಆದರೆ ಲೇಡೀಸ್ ಹಾಸ್ಟೆಲ್ ಸೌಕರ್ಯ ಅತ್ಯಂತ ಅಸಮರ್ಪಕವಾಗಿದೆ. ಐಐಐಟಿ–ಬಿ ಅದೇ ರೀತ ಪ್ರಸ್ತುತ ಇರುವ ಫುಡ್ ಕೋರ್ಟ್ ಸ್ಥಿತಿಯು ಕಳಪೆ ದುರಸ್ಥಿಯ ವ್ಯವಸ್ಥೆಯಲ್ಲಿದ್ದು, ಅಲ್ಲಿನ ಅಡುಗೆ ಕೊಠಡಿಯ ವ್ಯವಸ್ಥೆ ಇರುವುದಿಲ್ಲವೆಂದು ಹಾಗೂ ಒಂದೇ ಬಾರಿಗೆ 250–500 ಜನರಿಗೆ ಸೇವೆ ಸಲ್ಲಿಸಲು ಅವಶ್ಯಕತೆಗಳನ್ನು ಪೂರೈಸಲು ಸಾಮರ್ಥ್ಯ ಹೊಂದಿರುವುದಿಲ್ಲ. ಆದುದರಿಂದ ಐಐಐಟಿ–ಬಿ ಸಂಸ್ಥೆಯು ಅಡುಗೆ ಸೌಕರ್ಯಗಳೊಂದಿಗೆ ಹೊಸ ಫುಡ್ ಕೋರ್ಟ್ ಕಟ್ಟಲು ಪ್ರಸ್ತಾಪಿಸಿದೆ. ಐಐಐಟಿ–ಬಿ ಕ್ಯಾಂಪಸ್‌ನಲ್ಲಿ ಕ್ರೀಡೆ ಮತ್ತು ಮನೋರಂಜನಾ ಸೌಲಭ್ಯ ಇರುವುದಿಲ್ಲ. 500 ಆಸನಗಳ ಸಾಮರ್ಥ್ಯವುಳ್ಳ ಒಂದು ಮಲ್ಟಿಪರ್ಪಸ್ ಹಾಲ್ ಕಟ್ಟಲು ಉದ್ದೇಶಿಸಿದೆ.

ಮೇಲೆ ಓದಲಾದ ಇಂಟರ್‌ನ್ಯಾಷನಲ್ ಇನ್ಸಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಬೆಂಗಳೂರು ಇವರ ಪತ್ರ ದಿನಾಂಕ : 25–07–2011 ರಲ್ಲಿ ಲೇಡೀಸ್ ಹಾಸ್ಟೆಲ್, ಫುಡ್ ಕೋರ್ಟ್, ಹಾಗೂ ಮಲ್ಟಿಪರ್ಪಸ್ ಹಾಲ್ ಕಲ್ಪಿಸಲು ಕಟ್ಟಡದ ವಿಸ್ತರಣೆಯ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಇವುಗಳ ವಿಸ್ತೃತ ನಿರ್ಮಾಣದ ಅಂದಾಜು ವೆಚ್ಚವು ರೂ. 9.47 ಕೋಟಿಗಳು ಎಂದು ಅಂದಾಜಿಸಲಾಗಿದೆ. ಈ ಮೆಲ್ಕಂಡ ಕಾಮಗಾರಿಗಳಿಗೆ ಅಂದಾಜು ಪಟ್ಟಿ ಸಲ್ಲಿಸುತ್ತಾ ಸರ್ಕಾರದ ಆರ್ಥಿಕ ನೆರವನ್ನು ನೀಡಬೇಕಾಗಿ ಕೋರಿರುತ್ತಾರೆ.

ಈ ಪ್ರಸ್ತಾವನೆ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿದ್ದು, ಆರ್ಥಿಕ ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯಪಟ್ಟಿದೆ.

“Finance Department concurs for providing grant of Rs. 9.47 crores to IIIT-B, out of which Rs. 5 crores is provided as additionally through SE-II under the head of Account 3451-00-090-2-05-101 during 2011-12. Administrative Dept. is informed that the balance of Rs. 4.47 crores should be accommodated by Dept. of IT & BT within its plan outlay during the F.Y. 2012-13. Cabinet approval should be obtained.”

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2011, ಬೆಂಗಳೂರು ದಿನಾಂಕ: 17ನೇ ಅಕ್ಟೋಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇಂಟರ್‌ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಸಂಸ್ಥೆ ಬೆಂಗಳೂರಿನ ವಿದ್ಯುನ್ಮಾನ ನಗರದಲ್ಲಿ ಕ್ಯಾಂಪಸ್‌ನಲ್ಲಿ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಇನ್‌ಫಾರ್ಮೆಷನ್ ಟೆಕ್ನಾಲಜಿ [ಐಐಐಟಿ–ಬಿ] ಬೆಂಗಳೂರು ಇವರು ಬೆಂಗಳೂರು ವಿದ್ಯುನ್ಮಾನ ನಗರದಲ್ಲಿನ ಕ್ಯಾಂಪಸ್‌ನಲ್ಲಿ ಲೇಡೀಸ್ ಹಾಸ್ಟೆಲ್, ಫುಡ್–ಕೋರ್ಟ್ ಹಾಗೂ ಮಲ್ಟಿಪರ್ಪಸ್ ಹಾಲ್ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸಲು ರೂ. 9.47 ಕೋಟಿ ರೂಗಳ ಅಂದಾಜು ಪಟ್ಟಿಗಳಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ

1] 2011–12ನೇ ಆರ್ಥಿಕ ವರ್ಷದಲ್ಲಿ ಪೂರಕ ಅಯವ್ಯಯ ಲೆಕ್ಕ ಶೀರ್ಷಿಕೆ 3451–00–090–2–05–101 ಅಡಿಯಲ್ಲಿ ಹೆಚ್ಚುವರಿ ಅನುದಾನವಾಗಿ ರೂ. 5.00 ಕೋಟಿಗಳನ್ನು ಒದಗಿಸಲು

ಮತ್ತು

2] ಬಾಕಿ ರೂ. 4.47 ಕೋಟಿಗಳನ್ನು 2012–13ನೇ ಆರ್ಥಿಕ ವರ್ಷದಲ್ಲಿ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಯೋಜನಾ ವ್ಯಯದಲ್ಲಿ [Plan Outlay] ಒದಗಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ : ಎಫ್ ಡಿ 341 ವೆಚ್ಚ–2/2011 ದಿನಾಂಕ : 30–08–2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2554

**ಇ. ರಾಮಕೃಷ್ಣಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಜಗದೀಶ ಕೆ. ನಾಯಕ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಬಾದರ್ಲಿ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ (4) 25/2010–11 ದಿನಾಂಕ : 23–08–2011.

**ಪ್ರಸ್ತಾವನೆ :**

ಡಾ॥ ಜಗದೀಶ ಕೆ. ನಾಯಕ ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರಿ ಅಧಿಸೂಚನೆ ಸಂಖ್ಯೆ : ಆಕುಕ 303 ಹೆಚ್ ಎಸ್ ಹೆಚ್ 2010 ದಿನಾಂಕ : 09–09–2010 ರ ಪ್ರಕಾರ ಪ್ರಾಥಮಿಕ ಆರೋಗ್ಯ ಕೇಂದ್ರ, ಬಾದರ್ಲಿ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇಲ್ಲಿ ದಿನಾಂಕ : 05–01–2011 ರಂದು ಹುದ್ದೆಗೆ ಹಾಜರಾಗಿರುತ್ತಾರೆ. ನಂತರ ವೈಯಕ್ತಿಕ ಕಾರಣಗಳಿಂದ ದಿನಾಂಕ : 07–01–2011 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಆಯುಕ್ತರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ, ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ, ಕೆ.ಸಿ.ಎಸ್.ಆರ್ ನಿಯಮ 1977 ರ ನಿಯಮ 6ರ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಡಾ॥ ಜಗದೀಶ ಕೆ. ನಾಯಕ, ವೈದ್ಯಾಧಿಕಾರಿ ಇವರು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ರಾಯಚೂರು ಇವರಿಗೆ ಮನವಿ ಸಲ್ಲಿಸಿ, ದಿನಾಂಕ : 07–01–2011 ರಿಂದ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿರುವುದರಿಂದ ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 355 ಹೆಚ್‌ಎಸ್‌ಹೆಚ್ 2011, ಬೆಂಗಳೂರು ದಿನಾಂಕ: 12ನೇ ಅಕ್ಟೋಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಜಗದೀಶ ಕೆ. ನಾಯಕ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಬಾದರ್ಲಿ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 07–01–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ**

ಪಿ.ಆರ್.2555

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸರ್ಕಾರಿ ಆಯುಷ್ ಮಹಾವಿದ್ಯಾಲಯಗಳಲ್ಲಿ ಖಾಲಿ ಇರುವ ಬೋಧಕ ಹುದ್ದೆಗಳಿಗೆ ತಾತ್ಕಾಲಿಕವಾಗಿ ಗೌರವಧನದ ಆಧಾರದ ಮೇಲೆ ಬೋಧಕ ವರ್ಗದ ಸಿಬ್ಬಂದಿ ಸೇವೆಯನ್ನು ಪಡೆಯುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಆಯುಷ್/113/ಸಿಬ್ಬಂದಿ/(1)/2010–11, ದಿನಾಂಕ 28–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ರಾಜ್ಯದಲ್ಲಿರುವ ಸರ್ಕಾರಿ ಆಯುಷ್ ಕಾಲೇಜುಗಳಲ್ಲಿರುವ ಬೋಧಕ ಸಿಬ್ಬಂದಿಗಳ ಕೊರತೆಯ ಹಿನ್ನೆಲೆಯಲ್ಲಿ, CCIM ಮಾನ್ಯತೆ ರದ್ದುಪಡಿಸುವ ಸಂಭವವಿರುವುದರಿಂದ, ಸರ್ಕಾರಿ ಆಯುಷ್ ಕಾಲೇಜುಗಳಲ್ಲಿನ ಬೋಧಕ ಸಿಬ್ಬಂದಿ ಕೊರತೆಯನ್ನು ನಿವಾರಿಸಲು ಖಾಲಿ ಇರುವ ಹುದ್ದೆಗಳಿಗೆ ತಾತ್ಕಾಲಿಕವಾಗಿ ಆಯಾಯ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳಿಂದ ಗೌರವಧನ ನೀಡುವ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವುದರಿಂದ, ವಿದ್ಯಾರ್ಥಿಗಳಿಗೆ ಪಾಠ–ಪ್ರವಚನಗಳು ಸುಲಲಿತವಾಗಿ ಮುಗಿಸಲು ಸಾಧ್ಯವಾಗುವುದಾಗಿ ತಿಳಿಸಿ, ಈ ಕೆಳಕಂಡ ಬೋಧಕ ಹುದ್ದೆಗಳನ್ನು ಗೌರವಧನದ ಆಧಾರದ ಮೇಲೆ ಅತಿಥಿ ಬೋಧಕ ವರ್ಗದ ಸಿಬ್ಬಂದಿಯನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳಲು ಆಯುಷ್ ನಿರ್ದೇಶಕರು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

| | | | |
|---|---|---|---|
| 1. | ಆಯುರ್ವೇದ | ... | 46 ಹುದ್ದೆಗಳು |
| 2. | ಹೋಮಿಯೋಪತಿ | ... | 12 ಹುದ್ದೆಗಳು |
| 3. | ಯುನಾನಿ | ... | 16 ಹುದ್ದೆಗಳು |
| 4. | ಪ್ರಕೃತಿ ಚಿಕಿತ್ಸೆ ಮತ್ತು ಯೋಗ | ... | 05 ಹುದ್ದೆಗಳು |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, 2011–12ನೇ ಶೈಕ್ಷಣಿಕ ಸಾಲಿನಲ್ಲಿ ಮಾತ್ರ ಗೌರವಧನದ ಆಧಾರದ ಮೇಲೆ ಅತಿಥಿ ಬೋಧಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 47 ಪಿಟಿಡಿ 2011, ಬೆಂಗಳೂರು, ದಿನಾಂಕ : 23–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2011–12ನೇ ಶೈಕ್ಷಣಿಕ ವರ್ಷದ ಅವಧಿಗೆ ಮಾತ್ರ ಅನ್ವಯಿಸುವಂತೆ ಸರ್ಕಾರಿ ಆಯುಷ್ ಕಾಲೇಜುಗಳಲ್ಲಿ ಗರಿಷ್ಠ ಮಾಸಿಕ ₹8000/– ಗೌರವಧನದ ಆಧಾರದ ಮೇಲೆ ಮತ್ತು ಈ ಕೆಳಕಂಡ ಹುದ್ದೆಗಳಿಗೆ ಅನ್ವಯಿಸುವಂತೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳುವುದಕ್ಕೆ ಅನುಮತಿ ನೀಡಿ ಆದೇಶಿಸಿದೆ.

| | | | |
|---|---|---|---|
| 1. | ಆಯುರ್ವೇದ | ... | 46 ಹುದ್ದೆಗಳು |
| 2. | ಹೋಮಿಯೋಪತಿ | ... | 12 ಹುದ್ದೆಗಳು |
| 3. | ಯುನಾನಿ | ... | 16 ಹುದ್ದೆಗಳು |
| 4. | ಪ್ರಕೃತಿ ಚಿಕಿತ್ಸೆ ಮತ್ತು ಯೋಗ | ... | 05 ಹುದ್ದೆಗಳು |
| | | ಒಟ್ಟು | 79 ಹುದ್ದೆಗಳು |

ಷರತ್ತುಗಳು:–

1. ಆಯಾ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಅಭ್ಯರ್ಥಿಗಳ ಸೇವೆಯನ್ನು ಆಯಾ ವಿಷಯದಲ್ಲಿನ ಅತಿಥಿ ಉಪನ್ಯಾಸಕರ ಹುದ್ದೆಗೆ ತಾತ್ಕಾಲಿಕವಾಗಿ 2011–12ರ ಶೈಕ್ಷಣಿಕ ವರ್ಷದ ಅವಧಿಗೆ ಮಾತ್ರ ಮಾಸಿಕ ಗೌರವಧನದ ಪಾವತಿಯ ಮೇಲೆ ನೇಮಕಾತಿ ಮಾಡಿಕೊಳ್ಳತಕ್ಕದ್ದು.
2. ಖಾಯಂ ಉಪನ್ಯಾಸಕರಿಗೆ ನಿಗದಿಪಡಿಸಲಾಗಿರುವ ಅರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಅತಿಥಿ ಉಪನ್ಯಾಸಕರ ಹುದ್ದೆಗೆ ಆದ್ಯತೆಯ ಮೇಲೆ ಪರಿಗಣಿಸತಕ್ಕದ್ದು.

3. ಮಂಜೂರಾದ ಹಾಗೂ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಿಗೆ ಮಾತ್ರ ಅತಿಥಿ ಉಪನ್ಯಾಸಕರ ಸೇವೆಯನ್ನು ಉಪಯೋಗಿಸಿಕೊಳ್ಳತಕ್ಕದ್ದು.
4. ಈ ಅತಿಥಿ ಉಪನ್ಯಾಸಕರ ಸೇವೆಯನ್ನು ಖಾಯಂ ಆಗಿ ನೇರ ನೇಮಕಾತಿ ಮೂಲಕ ಹುದ್ದೆಯನ್ನು ಭರ್ತಿ ಮಾಡುವವರೆಗೆ ಅಥವಾ ಶೈಕ್ಷಣಿಕ ವರ್ಷ ಮುಗಿಯುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಬಳಸಿಕೊಳ್ಳತಕ್ಕದ್ದು.
5. ಖಾಯಂ ಉಪನ್ಯಾಸಕರು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ತಕ್ಷಣದಿಂದ ಅತಿಥಿ ಉಪನ್ಯಾಸಕರ ಕಾರ್ಯನಿರ್ವಹಣೆಯು ತಂತಾನೆ ರದ್ದಾಗುತ್ತದೆ.
6. ಪ್ರತಿ ಅತಿಥಿ ಉಪನ್ಯಾಸಕರಿಗೆ ಒಂದು ಗಂಟೆಯ ಉಪನ್ಯಾಸಕ್ಕೆ ₹500/– ರಂತೆ ಮಾಸಿಕ ಗರಿಷ್ಠ ₹8000/– ಗಳನ್ನು ಮೀರದಂತೆ ಗೌರವಧನವನ್ನು ನಿಗದಿ ಪಡಿಸತಕ್ಕದ್ದು.
7. ಅತಿಥಿ ಉಪನ್ಯಾಸಕರ ಸೇವೆಯನ್ನು ಬಳಸಿಕೊಳ್ಳುವಾಗ ಅವರಿಗೆ ಸಕ್ಷಮ ಪ್ರಾಧಿಕಾರದ ಆದೇಶವಿಲ್ಲದೇ, ಯಾವುದೇ ಆದೇಶವನ್ನು ನೀಡತಕ್ಕದ್ದಲ್ಲ, ಅತಿಥಿ ಉಪನ್ಯಾಸಕರು ಸಲ್ಲಿಸುವ ಸೇವೆಯನ್ನು ಇತರೆ ಯಾವುದೇ ಸರ್ಕಾರಿ ಸೇವಾ ಸಕ್ರಮಾತಿಗೆ ಪರಿಗಣಿಸತಕ್ಕದ್ದಲ್ಲ.

ಈ ಗೌರವಧನವನ್ನು ಕೆಳಕಂಡ ವೇತನ ಲೆಕ್ಕ ಶೀರ್ಷಿಕೆಗಳ ಅಡಿಯಲ್ಲಿ ಭರಿಸತಕ್ಕದ್ದು

| | | |
|---|---|---|
| 1. ಆಯುರ್ವೇದ | ... | 2210–05–101–1–03 |
| 2. ಹೋಮಿಯೋಪತಿ | ... | 2210–05–102–0–02 |
| 3. ಯುನಾನಿ | ... | 2210–05–103–0–01 |
| 4. ಪ್ರಕೃತಿ ಚಿಕಿತ್ಸೆ ಮತ್ತು ಯೋಗ | ... | 2210–05–200–0–01 |

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 01–08–2011ರ ಸಂಖ್ಯೆ: ಆಇ 439 ವೆಚ್ಚ–5/2011ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್. 2556

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಸತೀಶ ಕಲ್ಲಟ್ಟಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಉಗಾರ ಕೆ.ಡಿ. ಬೆಳಗಾಂ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಆರ್ಓ(3)100/2011–12, ದಿನಾಂಕ 03/09/2011.

**ಪ್ರಸ್ತಾವನೆ :**

ಡಾ॥ ಸತೀಶ ಕಲ್ಲಟ್ಟಿ, ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ/303/ಹೆಚ್ಎಸ್ಹೆಚ್/2010, ದಿನಾಂಕ 09/09/2010ರಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ, ಉಗಾರ ಕೆ.ಡಿ. ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆಗೆ ನೇಮಕಾತಿ ಮಾಡಲಾಗಿ ದಿನಾಂಕ 18/09/2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ನಂತರ ಸ್ವಇಚ್ಛೆಯಿಂದ ರಾಜೀನಾಮೆ ಸಲ್ಲಿಸಿ ದಿನಾಂಕ 16/06/2011 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ತರಹದ ಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ 16–06–2011 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಆಕುಕ 373 ಹೆಚ್ಎಸ್ಹೆಚ್ 2011, ಬೆಂಗಳೂರು, ದಿನಾಂಕ : 14–10–2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಸತೀಶ ಕಲ್ಲಟ್ಟಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ ಉಗಾರ ಕೆ.ಡಿ. ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ 16/06/2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಪಿ.ಆರ್. 2557

